೩೪

# ಋಗ್ವೇದ

ಎಂ. ಎ. ಕೃಷ್ಣಸ್ವಾಮಿ



ಪ್ರಚಾರ ಪುಸ್ತಕಮಾಲೆ-೩೪

# ಋಗ್ವೇದ

ಎಂ. ಎ. ಕೃಷ್ಣಸ್ವಾಮಿ





ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೭೪

ಮೊದಲನೆಯ ಮುದ್ರಣ—೨೦೦೦ ಪ್ರತಿಗಳು, ೧೯೪೩
ಎರಡನೆಯ ಮುದ್ರಣ — ೨೦೦೦ ಪ್ರತಿಗಳು, ೧೯೫೫
ಮೂರನೆಯ ಮುದ್ರಣ—೨೦೦೦ ಪ್ರತಿಗಳು, ೧೯೭೪
ನಾಲ್ಕನೆಯ ಮುದ್ರಣ—೫೦೦೦ ಪ್ರತಿಗಳು, ೧೯೭೪



ಬೆಲೆ: ೬೫ ಪೈಸೆ

ಪ್ರಕಾಶಕರು :
ನಿರ್ದೇಶಕರು, ಪ್ರಸಾರಾಂಗ
ಮಾನಸಗಂಗೋತ್ರಿ, ಮೈಸೂರು—೫೭೦೦೧೬

ಮುದ್ರಕರು :
ಜ್ಯೂಪಿಟರ್ ಪ್ರಿಂಟರ್ಸ್, ಮೈಸೂರು

# ಕೃತಜ್ಞತೆ

ಕಳೆದ ನವೆಂಬರ್ ತಿಂಗಳಲ್ಲಿ ಹೊಸಕೋಟೆಯಲ್ಲಿ ಮಾಡಿದ ಉಪನ್ಯಾಸಗಳನ್ನು ಆಧಾರಮಾಡಿಕೊಂಡು ಈ ಚಿಕ್ಕ ಪುಸ್ತಕವನ್ನು ಬರೆಯಲಾಗಿದೆ. ಇಷ್ಟು ಚಿಕ್ಕ ಪುಸ್ತಕದಲ್ಲಿ ಋಗ್ವೇದದ ಎಲ್ಲ ಅಂಶಗಳನ್ನು ಪರಿಚಯ ಮಾಡಿಕೊಡುವುದು ಅಸಾಧ್ಯ. ವೇದದ ಭಾಷೆ, ಸ್ವರ, ಛಂದಸ್ಸು, ವೇದದ ಕಾಲದ ಸಾಮಾಜಿಕ ಸ್ಥಿತಿ ಮುಂತಾದ ವಿಷಯಗಳನ್ನು ಸ್ಥಳಸಂಕೋಚದಿಂದ ಬಿಡಬೇಕಾಯಿತು. ಅಂತೂ ಇದರಿಂದ ಋಗ್ವೇದದ ಸ್ಥೂಲ ಪರಿಚಯವಾದರೆ ಅದಕ್ಕಾಗಿ ಕೆಲಸಮಾಡಿದವರೆಲ್ಲರ ಶ್ರಮ ಸಾರ್ಥಕವೆನಿಸೀತು.

ಪ್ರಚಾರ ಪುಸ್ತಕಮಾಲೆಯ ಸಂಪಾದಕೀಯ ಮಂಡಲಿಯವರ ಉಪಯುಕ್ತವಾದ ಸಲಹೆಗಳಿಲ್ಲದಿದ್ದರೆ ಪುಸ್ತಕ ಒಪ್ಪಾಗುತ್ತಿರಲಿಲ್ಲ. ಇವರ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಶ್ರೀಮಾನ್ ಎಸ್.ವಿ. ರಂಗಣ್ಣನವರ ಮತ್ತು ಇತರ ಹಿರಿಯರ ಮಿತ್ರರ ಸಹಾನುಭೂತಿ ಸೌಜನ್ಯಗಳು ಈ ಪುಸ್ತಕ ಹೊರಬರಲು ಸಹಾಯಕಗಳಾಗಿವೆ; ಇವರೆಲ್ಲರಿಗೂ ನಾನು ಚಿರಋಣಿ.

ಬೆಂಗಳೂರು
೨೫-೩-೧೯೪೨

ಎಂ. ಎ. ಕೃಷ್ಣಸ್ವಾಮಿ

## ವಿಷಯಾನುಕ್ರಮಣಿಕೆ

# ಮುನ್ನುಡಿ

ಮೈಸೂರು ವಿಶ್ವವಿದ್ಯಾನಿಲಯದ ಮೊದಲನೆಯ ಚಾನ್ಸಲರವರಾದ ಆಳಿದ ಮಹಾಸ್ವಾಮಿಯವರಾದ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ ಸೆನೆಟ್ ಸಭೆಯ ಪ್ರಾರಂಭೋತ್ಸವದ ಭಾಷಣದಲ್ಲಿಯೂ ಪುನಃ ಮೊದಲನೆಯ ಕಾನ್ವೊಕೇಷನ್ ಮಹೋತ್ಸವದ ಭಾಷಣದಲ್ಲಿಯೂ ವಿಶ್ವವಿದ್ಯಾನಿಲಯದ ಪಾಲಿಗೆ ಹಲವು ಕರ್ತವ್ಯಗಳನ್ನು ಅಪ್ಪಣೆ ಮಾಡಿದರು. ಅವುಗಳಲ್ಲಿ ವಿಶೇಷವಾದವು ಇವೆರಡು : ಒಳ್ಳೆಯ ಕನ್ನಡದಲ್ಲಿ ಬರೆದ ಪುಸ್ತಕಗಳ ಪ್ರಕಟನೆ, ಹಾಗೂ ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ; ಮತ್ತು ಶ್ರೀಮನ್ಮಹಾರಾಜರವರ ಪ್ರಜೆಗಳಲ್ಲಿ ಯಾರು ಕಾರಣಾಂತರಗಳಿಂದ ಕ್ರಮಬದ್ಧವಾದ ಶಿಕ್ಷಣ ಶಿಸ್ತುಗಳಲ್ಲಿ ಭಾಗವಹಿಸಿ ಪರೀಕ್ಷೆಗಳಿಗೆ ಕೂಡಲು ಶಕ್ತರಲ್ಲವೋ ಅಂಥವರಲ್ಲಿ ಜ್ಞಾನಪ್ರಸಾರ ಮಾಡುವುದು; ಅಲ್ಲದೆ ಮೈಸೂರು, ಬೆಂಗಳೂರು ಈ ಎರಡು ಹಿರಿಯ ಪಟ್ಟಣಗಳಲ್ಲಿ ದೊರಕುವ ವಿದ್ಯಾಭ್ಯಾಸಾನುಕೂಲ್ಯಗಳನ್ನು ಪಡೆದಿಲ್ಲದ, ಸಂಸ್ಥಾನದ ದೂರ ದೂರ ಪ್ರದೇಶಗಳಲ್ಲಿ ವಾಸಿಸುವ ಜನರಲ್ಲಿ ಉಚ್ಚ ವರ್ಗದ ಸಂಸ್ಕೃತಿಯನ್ನು ಹರಡುವುದು.

ವಿಶ್ವವಿದ್ಯಾನಿಲಯವು ಸ್ಥಾಪಿತವಾದಂದಿನಿಂದಲೂ ಈ ಎರಡು ಮುಖ್ಯ ಧ್ಯೇಯಗಳನ್ನು ತನ್ನ ಮುಂದೆ ತಪ್ಪದೆ ನಿಲ್ಲಿಸಿಕೊಂಡಿದೆ. ಅದರ ಕನ್ನಡ ಪ್ರಕಟನ ಶಾಖೆಯು ಕೆಲವು ಪ್ರಸಿದ್ಧ ಹಳಗನ್ನಡ ಕಾವ್ಯಗಳನ್ನು ಎಚ್ಚರಿಕೆಯಿಂದ ಪರಿಷ್ಕರಿಸಿ ಅಚ್ಚು ಹಾಕಿಸಿದೆ; ಅಲ್ಲದೆ, ಸಾಹಿತ್ಯ ವಿಜ್ಞಾನ ವಿಷಯಗಳನ್ನು ಕುರಿತ ಕೆಲವು ಲಘು ಪುಸ್ತಕಗಳನ್ನೂ ಹೊರತಂದಿದೆ. ಪ್ರಚಾರೋಪ

ನ್ಯಾಸ ಸಮಿತಿಯವರು ಸಂಸ್ಥಾನದ ಎಲ್ಲ ಭಾಗಗಳ ಅನೇಕ ಕೇಂದ್ರಗಳಲ್ಲಿ ಹೆಚ್ಚಾಗಿ ಕನ್ನಡದಲ್ಲಿಯೇ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದಾರೆ.

ಇತ್ತೀಚಿಗೆ ಒಂದು ಫಲದಾಯಕವಾದ ಕಾರ್ಯಕ್ರಮ ಬೆಳೆದು ಬರುತ್ತಿದೆ. ವಿಷಯ ಒಂದೊಂದಕ್ಕೆ ಒಂದೊಂದರಂತೆ ಬಿಡಿ ಉಪನ್ಯಾಸವನ್ನು ಕೊಡಿಸುವುದರ ಜೊತೆಗೆ, ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದ ಸಹಕಾರದಿಂದ ಸಂಸ್ಕೃತಿ ಸಪ್ತಾಹಗಳೆಂದು ಈಗಾಗಲೇ ಕರೆಯಲ್ಪಡುತ್ತಿರುವ ಉಪನ್ಯಾಸ ಮಾಲೆಗಳನ್ನು ಇಡಿಸಲಾಗುತ್ತಿದೆ. ಒಂದೇ ಊರಿನಲ್ಲಿ ಐದಾರು ದಿನ ಭಾಷಣ ಕಾವ್ಯವಾಚನ ಸಂಗೀತಾದಿಗಳು ಜರುಗುತ್ತವೆ; ಉಪನ್ಯಾಸಗಳು ಸಾಹಿತ್ಯ ವಿಜ್ಞಾನ ಸಮಾಜವೆಲ್ಲಕ್ಕೂ ಸಂಬಂಧಿಸಿರುತ್ತವೆ. ಈ ಸಪ್ತಾಹಗಳು ನೆರವೇರಿದ ದೊಡ್ಡ ಬಳ್ಳಾಪುರ, ದಾವಣಗೆರೆ, ಕೋಲಾರ ಮುಂತಾದ ಎಲ್ಲ ಕಡೆಗಳಿಂದಲೂ ಅವಕ್ಕೆ ಬಹಳ ಮನ್ನಣೆ ದೊರೆತಿದೆ.

ಈಗ ಅತಿ ಹೊಸದಾದ ಏರ್ಪಾಡಾವುದೆಂದರೆ: ಒಂದೆರಡು ಊರುಗಳನ್ನು ಆರಿಸಿಕೊಂಡು, ಅಲ್ಲಿಗೆ ಒಂದು ವರ್ಷದಲ್ಲಿ ಹಲವು ಬಾರಿ ಹೋಗಿ, ಕೆಲವು ವಿಷಯಗಳಲ್ಲಿ ಒಂದೊಂದನ್ನು ಕುರಿತು ನಾಲ್ಕಾರು ಉಪನ್ಯಾಸಗಳನ್ನು ಹೇಳುವ ಯೋಜನೆ. ಅದರಿಂದ ಆ ಊರುಗಳ ಜನರಿಗೆ ಅನಲ್ಪಕಾಲ ಎಡೆಬಿಡದೆ ಜ್ಞಾನಬೋಧೆ ಸಿಕ್ಕುವುದು. ಪ್ರತ್ಯಕ್ಷ ಕೇಳಿ ಉಪಯೋಗಪಡೆದ ಸಭಿಕರ ಗುಂಪಿನಿಂದ ಆಚೆಗೂ ಕೂಡ ಈ ಭಾಷಣಮಾಲೆಗಳ ಪ್ರಯೋಜನ ಹರಡಲೆಂಬ ಉದ್ದೇಶದಿಂದ ಅವುಗಳನ್ನು ಈ ರೀತಿ ಚಿಕ್ಕ ಹೊತ್ತಗೆಗಳಾಗಿ ಪ್ರಕಟಿಸಿದೆ.

ಆಳಿದ ಘನ ಪ್ರಭುಗಳವರು ನಮ್ಮ ವಿಶ್ವವಿದ್ಯಾನಿಲಯಕ್ಕೆ

ಎರಡು ಪವಿತ್ರ ಕರ್ತವ್ಯಗಳನ್ನು ನೇಮಿಸಿದರಷ್ಟೆ: ಸುಲಭ ಸಮಂಜಸ ಕನ್ನಡದಲ್ಲಿ ರಚಿಸಿದ ಗ್ರಂಥಗಳ ಪ್ರಕಟನೆ; ಜನತೆಯಲ್ಲಿ ಉತ್ತಮ ಬಗೆಯ ಸಂಸ್ಕೃತಿಯ ಪ್ರಸಾರ. ಆ ಎರಡು ಕರ್ತವ್ಯಗಳನ್ನೂ ಈ ಮಾರ್ಗವಾಗಿ ಒಂದೇ ಸಾರಿ ಸಾಧಿಸಬಹುದೆಂಬುದೇ ಹೀಗೆ ಉಪನ್ಯಾಸಗಳನ್ನು ಕೊಟ್ಟು ಲಘು ಪುಸ್ತಕಗಳನ್ನು ಸಿದ್ಧಮಾಡಿದವರ ನಿರೀಕ್ಷೆ ಮತ್ತು ಹೆಬ್ಬಯಕೆ.

ವಿಶ್ವವಿದ್ಯಾನಿಲಯ, ಮೈಸೂರು
೧-೮-೧೯೪೦

ಎಸ್. ಎಸ್. ಸುಬ್ಬರಾವ್

# ಕೆಲವು ಋಕ್ಕುಗಳು

## ಅಗ್ನಿ

ಸ ನಃ ಪಿತೇವ ಸೂನವೇಽಗ್ನೇ ಸೂಪಾಯನೋ ಭವ
ಸಚಸ್ವಾ ನಃ ಸ್ವಸ್ತಯೇ ॥
(ಮಂ. ೧, ಸೂ. ೧, ಋ. ೯)

## ಇಂದ್ರ

ಯೋ ಜಾತ ಏವ ಪ್ರಥಮೋ ಮನಸ್ವಾನ್
ದೇವೋ ದೇವಾನ್ ಕ್ರತುನಾ ಪರ್ಯಭೂಷತ್ ।
ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಂ
ನೃಮ್ಣಸ್ಯ ಮಹ್ನಾ ಸ ಜನಾಸ ಇಂದ್ರಃ ॥
(ಮಂ. ೨, ಸೂ. ೧೨, ಋ. ೧)

## ವರುಣ

ಅರ್ಯಮ್ಯಂ ವರುಣ ಮಿತ್ರ್ಯಂ ವಾ
ಸಖಾಯಂ ವಾ ಸದಮಿದ್ಭ್ರಾತರಂ ವಾ ।
ವೇಶಂ ವಾ ನಿತ್ಯಂ ವರುಣಾರಣಂ ವಾ
ಯತ್ಸೀಮಾಗಶ್ಚಕೃಮಾ ಶಿಶ್ರಥಸ್ತತ್ ॥
(ಮಂ. ೫, ಸೂ. ೮೫, ಋ. ೭)

## ಸವಿತೃ

ಹಿರಣ್ಯಹಸ್ತೋ ಅಸುರಃ ಸುನೀಥಃ
ಸುಮೃಳೀಕಃ ಸ್ವವಾಁ ಯಾತ್ವರ್ವಾಙ್ ।
ಅಪಸೇಧನ್ರಕ್ಷಸೋ ಯಾತುಧಾನಾನ್
ಅಸ್ಥಾದ್ದೇವಃ ಪ್ರತಿದೋಷಂ ಗೃಣಾನಃ ॥
(ಮಂ. ೧, ಸೂ. ೩೫, ಋ. ೧೦)

## ಸೂರ್ಯ

ದಿವೋ ರುಕ್ಮ ಉರುಚಕ್ಷಾ ಉದೇತಿ
ದೂರೇಅರ್ಥಸ್ತರಣಿರ್ಭ್ರಾಜಮಾನಃ ।

ನೂನಂ ಜನಾಃ ಸೂರ್ಯೇಣ ಪ್ರಸೂತಾ
ಅಯನ್ನರ್ಥಾನಿ ಕೃಣವನ್ನಪಾಂಸಿ ॥
(ಮಂ. ೭, ಸೂ. ೬೩, ಋ. ೪)

## ವಿಷ್ಣು

ಪ್ರ ತದ್ವಿಷ್ಣುಃ ಸ್ತವತೇ ವೀರ್ಯೇಣ
ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ ।
ಯಸ್ಯೋರುಷು ತ್ರಿಷು ವಿಕ್ರಮಣೇ-
ಷ್ವಧಿಕ್ಷಿಯನ್ತಿ ಭುವನಾನಿ ವಿಶ್ವಾ ॥
(ಮಂ. ೧, ಸೂ. ೧೫೪, ಋ. ೨)

## ರುದ್ರ

ಆ ತೇ ಪಿತರ್ಮರುತಾಂ ಸುಮ್ನಮೇತು
ಮಾ ನಃ ಸೂರ್ಯಸ್ಯ ಸಂದೃಶೋ ಯುಯೋಥಾಃ ।
ಅಭಿ ನೋ ವೀರೋ ಅರ್ವತಿ ಕ್ಷಮೇತ
ಪ್ರ ಜಾಯೇಮಹಿ ರುದ್ರ ಪ್ರಜಾಭಿಃ ॥
(ಮಂ. ೨, ಸೂ. ೩೩, ಋ. ೧)

## ಉಷಸ್

ಉದು ಶ್ರಿಯಾ ಉಷಸೋ ರೋಚಮಾನಾ
ಅಸ್ಥುರಪಾಂ ನೋರ್ಮಯೋ ರುಶನ್ತಃ ।
ಕೃಣೋತಿ ವಿಶ್ವಾ ಸುಪಥಾ ಸುಗಾ-
ನ್ಯಭೂದು ವಸ್ವೀ ದಕ್ಷಿಣಾ ಮಘೋನೀ ॥
(ಮಂ. ೬, ಸೂ. ೬೪, ಋ. ೧)

ಭದ್ರಾ ದದೃಕ್ಷ ಉರ್ವಿಯಾ ವಿ ಭಾ-
ಸ್ಯುತ್ತೇ ಶೋಚಿರ್ಭಾನವೋ ದ್ಯಾಮಪಪ್ತನ್ ।
ಆವಿರ್ವಕ್ಷಃ ಕೃಣುಷೇ ಶುಂಭಮಾನೋ-
ಷೋ ದೇವಿ ರೋಚಮಾನಾ ಮಹೋಭಿಃ ॥
(ಮಂ. ೬, ಸೂ. ೬೪, ಋ. ೨)

## ೧ ಪೀಠಿಕೆ

ತನಗೆ ತಿಳಿದ ವಿಷಯವನ್ನು ತನ್ನೊಡನಿರುವವರಿಗೆ ತಿಳಿಸಲು ಪ್ರಯತ್ನ ಮಾಡುವುದು ಮನುಷ್ಯನ ಸಹಜ ಗುಣ. ತಾನು ಕಂಡ ಭವ್ಯದೃಶ್ಯವನ್ನೋ, ತಾನು ಅನುಭವಿಸಿದ ಸುಖ ಸಂತೋಷ ಗಳನ್ನೋ, ತನಗಾದ ನೋವು ಸಂಕಟಗಳನ್ನೋ ಇತರರಿಗೆ ತಿಳಿಸದೆ ಇದ್ದರೆ ಅವನಿಗೆ ತೃಪ್ತಿಯಿರುವುದಿಲ್ಲ. ಆದುದರಿಂದಲೇ ತನ್ನ ಅನುಭವವನ್ನು ಇತರರಿಗೆ ತಿಳಿಸುವ ಪ್ರಯತ್ನವನ್ನು ಮನುಷ್ಯನು ತನಗೆ ತಿಳಿವುಂಟಾದಂದಿನಿಂದ ಮಾಡುತ್ತಿದ್ದಾನೆ. ನಾಲ್ಕೈದು ಸಹಸ್ರ ವರ್ಷಗಳ ಹಿಂದೆ ಸಿಂಧೂನದಿಯ ತೀರಕ್ಕೆ ಬಂದು ನೆಲಸಿದ "ಆರ್ಯರು" ಬಹುಮಟ್ಟಿಗೆ ತಿಳಿವುಳ್ಳವ ರಾಗಿದ್ದರು. ಆ ಹೊಸ ಸನ್ನಿವೇಶದಲ್ಲಿ ನೆಲಸಿ ಅಲ್ಲಿ ತಾವು ಭಾವಿಸಿದ ಭಾವಗಳನ್ನೂ ಯೋಚಿಸಿದ ಯೋಚನೆಗಳನ್ನೂ ತಿಳಿದ ತಿಳಿವನ್ನೂ ಒಟ್ಟುಗೂಡಿಸಿದರು. ಅದನ್ನು ಗುರುವಿನಿಂದ ಶಿಷ್ಯ ಕಲಿತು ತನ್ನ ಶಿಷ್ಯರಿಗೆ ಉಪದೇಶಮಾಡಿದನು; ಅದು ಆ ಶಿಷ್ಯರಿಂದ ಅವರ ಶಿಷ್ಯಗಣಕ್ಕೆ, ಅವರಿಂದ ಇತರರಿಗೆ, ಹೀಗೆ ಇಂದಿನವರೆಗೂ ಅವಿಚ್ಛಿನ್ನವಾಗಿ ನಡೆದುಬಂದಿದೆ. ಈ ತಿಳಿವಿನ ಸಮುದಾಯವೇ "ವೇದ." "ವೇದ"ವೆಂಬ ಪದಕ್ಕೆ "ಜ್ಞಾನ, ತಿಳಿವು" ಎಂದು ಅರ್ಥ; "ವಿದ–ಜ್ಞಾನೇ" ಎಂಬ ಧಾತುವಿನಿಂದ "ವೇದ" ಎಂಬ ಪದ ಬಂದಿದೆ. ಈ ತಿಳಿವು ಕೇವಲ ಪ್ರಾಪಂಚಿಕವಾದ ಮನೆ, ಮಠ, ವ್ಯವಸಾಯ ಮುಂತಾದುವು ಗಳನ್ನು ಕುರಿತದ್ದಲ್ಲ; ಯಾವ ದೇವತೆಗಳ ಅನುಗ್ರಹ ವರ

ಪ್ರಸಾದಗಳಿಂದ ಈ ಎಲ್ಲ ಕೆಲಸಗಳಲ್ಲಿಯೂ ಜಯ, ಸಮೃದ್ಧಿ, ಶುಭಗಳನ್ನು ನಿರೀಕ್ಷಿಸುತ್ತಿದ್ದರೋ, ಅಂಥಾ ದೇವತೆಗಳನ್ನು ಕುರಿತ ತಿಳಿವು. ಆ ದೇವತೆಗಳನ್ನು ಬೇಡುವ ವಿಧಾನ, ಅವರನ್ನು ಒಲಿಸಿಕೊಳ್ಳುವ ಸಾಧನಗಳು, ಅವರ ಶಕ್ತಿ ಸ್ವಭಾವ—ಇವುಗಳನ್ನು ತಿಳಿಸುವ ಜ್ಞಾನರಾಶಿ ವೇದ. ಈ ರಾಶಿ ಸಾಕಷ್ಟು ದೊಡ್ಡದು. ಇದರ ಒಂದು ಮುಖ್ಯ ವಿಭಾಗವಾದ ಋಗ್ವೇದದ ಪರಿಚಯಮಾಡಿಕೊಡುವುದು ಈ ಪುಟ್ಟ ಪುಸ್ತಕದ ಉದ್ದೇಶ.

ವೇದದ ಪರಿಚಯವಿರಬೇಕಾದುದು ಎಲ್ಲರಿಗೂ ಅಗತ್ಯ; ಭಾರತೀಯರಿಗಂತೂ ಅತ್ಯಗತ್ಯ. ಹಿಂದೂಧರ್ಮದ ಒಂದೊಂದು ಮತದವರೂ ತಮ್ಮ ಸಿದ್ಧಾಂತಗಳನ್ನು ವೇದಗಳಲ್ಲಿ ಹೇಳಿರುವ ಹಲಕೆಲವು ಮಾತುಗಳಿಂದ ಸಮರ್ಥನೆ ಮಾಡುವುದರಿಂದ ಅವುಗಳೆಲ್ಲಕ್ಕೂ ವೇದ ಉದ್ಗಮಸ್ಥಾನವಾಗಿದೆ. ಆದುದರಿಂದಲೇ ವೇದ ಹಿಂದೂಧರ್ಮದ ಮೂಲ. ಯಾವೊಬ್ಬ ಹಿಂದೂವಿನ ಜೀವನವೇ ಆಗಲಿ, ಹುಟ್ಟಿದಂದಿನಿಂದ ಸಾಯುವವರೆಗೆ, ಒಂದಲ್ಲೊಂದು ವಿಧದಲ್ಲಿ ವೇದದ ಪ್ರಭಾವಕ್ಕೆ ಸಿಕ್ಕಿದೆ. ಮುಂಜಿ, ಮದುವೆ, ಪ್ರೇತಕರ್ಮ, ಶ್ರಾದ್ಧ—ಇವೆಲ್ಲಕ್ಕೂ ವೇದಮಂತ್ರಗಳನ್ನುಚ್ಚರಿಸಬೇಕಾದ ಆವಶ್ಯಕತೆಯಿದೆ. ಅಲ್ಲದೆ ನಮ್ಮ ಇಷ್ಟದೇವತೆಗಳಾದ ವಿಷ್ಣು ರುದ್ರರೂ ಸಹ ನಮಗೆ ದೊರೆತುದು ವೇದಗಳಿಂದಲೇ.

ಅಲ್ಲದೆ ಮಾನವ ಸಂಸ್ಕೃತಿಯ ಬೆಳವಣಿಗೆಯನ್ನು ತಿಳಿಯಲಾಶಿಸುವವನೂ ಕೂಡ ವೇದದ ಪರಿಚಯಮಾಡಿಕೊಳ್ಳಬೇಕಾದುದು ಅತ್ಯಗತ್ಯ. ಪ್ರಪಂಚದಲ್ಲಿ ಇತರ ಕಡೆಯಲ್ಲಿ ಕಗ್ಗತ್ತಲು ಕವಿದಿದ್ದಾಗ ಜ್ಞಾನಸೂರ್ಯನು ವೇದದ ಕಾಲದ ಆರ್ಯಾವರ್ತದಲ್ಲಿ ಬೆಳಗುತ್ತಿದ್ದನು. ದೇವರೆಂಬ ಭಾವನೆ ಹುಟ್ಟಿ ಬೆಳೆದು

ಬಂದಿರುವ ರೀತಿ, ಪೂಜಾಕ್ರಮದಲ್ಲಿ ಆಗಿರುವ ಬದಲಾವಣೆಗಳು, ಮತಸಿದ್ಧಾಂತಗಳು ಹುಟ್ಟಿಬೆಳೆದು ವ್ಯಾಪಿಸುವ ಪರಿ, ಇವೆಲ್ಲ ವನ್ನೂ ಕಾಣಬೇಕೆನ್ನುವವನು ವೇದವನ್ನು ಪರಿಚಯಮಾಡಿ ಕೊಳ್ಳದೆ ಗತ್ಯಂತರವಿಲ್ಲ. ಭಾಷೆಯ ಹುಟ್ಟು ಬೆಳವಣಿಗೆಗಳನ್ನು ತಿಳಿಯಬೇಕೆಂದಿರುವ ಭಾಷಾಶಾಸ್ತ್ರಜ್ಞನಿಗೂ ವೇದದ ಭಾಷೆ ಪರಿಚಿತವಾಗಬೇಕಾದುದು ಅತ್ಯಾವಶ್ಯಕ. ಒಂದಲ್ಲ ಒಂದು ವಿಧವಲ್ಲಿ ಭಾರತೀಯರಿಗೂ ಭಾರತೀಯರಲ್ಲದವರಿಗೂ ಎಲ್ಲರಿಗೂ ವೇದದ ಜ್ಞಾನ ಅತ್ಯವಶ್ಯವೆಂದಂತಾಯಿತು.

## ೨ ವೇದ ಮತ್ತು ವೈದಿಕಸಾಹಿತ್ಯ

ಬ್ರಹ್ಮನು ಉಸುರಿದ ಈ ಜ್ಞಾನವನ್ನು ಋಷಿಗಳು ಕೇಳಿ ಅವರಿಂದ ಅವರ ಶಿಷ್ಯರು ಕೇಳಿ ತಿಳಿದುದರಿಂದ ಇದಕ್ಕೆ "ಶ್ರುತಿ" ಯೆಂದೂ, ನಿಷ್ಕೃಷ್ಟವಾದ ಜ್ಞಾನವನ್ನು ಕೊಡುವುದಾದ್ದರಿಂದ "ನಿಗಮ"ವೆಂದೂ, ಪರಬ್ರಹ್ಮದ ವಿಷಯಚಿಂತನೆಗೆ ಸಾಧನವಾದ ಜ್ಞಾನಸಮುದಾಯವಾದುದರಿಂದ "ಆಮ್ನಾಯ"ವೆಂದೂ ವೇದಕ್ಕೆ ಬೇರೆ ಬೇರೆ ಹೆಸರುಗಳಿವೆ. ವೇದದಲ್ಲಿ ನಾಲ್ಕು ಅಂಶ ಗಳಿವೆ. ಸ್ತೋತ್ರ ಒಂದನೆಯದು, ಪೂಜೆ ಎರಡನೆಯದು, ಹಾಡು ಮೂರನೆಯದು, ಮಂತ್ರತಂತ್ರಗಳು ನಾಲ್ಕನೆಯದು; ಇವೊಂದೊಂದೂ ಒಂದೊಂದು ವೇದದ ವೈಶಿಷ್ಟವಾಗಿರು ವುದರಿಂದ ವೇದಗಳು ನಾಲ್ಕು ಎಂದು ಹೇಳುವುದು ವಾಡಿಕೆ ಯಾಗಿದೆ. ಇವುಗಳಲ್ಲಿ ಮೊದಲನೆಯದು ಸ್ತುತಿರೂಪವಾದ ವಾಕ್ಯಸಮುದಾಯವನ್ನು ಒಳಗೊಂಡಿರುವುದರಿಂದ ಅದಕ್ಕೆ 'ಋಗ್ವೇದ'ವೆಂದು ಹೆಸರು. ಆಗಿನವರ ಪೂಜಾವಿಧಾನಕ್ಕೆ ಯಾಗ ಅಥವಾ ಯಜ್ಞ ಎಂಬ ಹೆಸರಿದೆ. ಯಾಗದಲ್ಲಿ ಒಂದು

ಹವಿಸ್ಸನ್ನು ಅಥವಾ ನೈವೇದ್ಯವನ್ನು ದೇವತೆಗೆ ನಿವೇದಿಸುವ ಮೊದಲು ಆ ದೇವತೆಯನ್ನು ಕರೆದು ವರ್ಣಿಸಿ ಹೊಗಳಬೇಕಾದುದು ಯಜಮಾನನ (ಯಾಗಮಾಡುವವನ) ಕರ್ತವ್ಯ. ಈ ಯಾಗವನ್ನು ಒಬ್ಬನೇ ಒಬ್ಬ ವ್ಯಕ್ತಿ ಕುಳಿತು ಮಾಡಲಾಗದುದರಿಂದ, ಅನೇಕರನ್ನು ಸಹಾಯಕ್ಕಾಗಿ ನಿಯಮಿಸಿಕೊಳ್ಳಬೇಕಾಗಿತ್ತು. ಹೀಗೆ ನಿಯಮಿತರಾದವರೇ 'ಋತ್ವಿಕ್ಕು'ಗಳು. ದೇವತೆಗಳನ್ನು ಕರೆದು ಹೊಗಳುವವನು ಇವರಲ್ಲೊಬ್ಬ, ಅವನೇ 'ಹೋತೃ.' ಋಗ್ವೇದ ಒಳಗೊಂಡಿರುವ ಋಕ್ಕುಗಳನ್ನು ಪಠಿಸುವುದು ಈ ಹೋತೃವಿನ ಕೆಲಸವಾದುದರಿಂದ ಅದನ್ನು 'ಹೋತೃವೇದ' ಎಂದೂ ಕರೆಯುವುದುಂಟು. ಪೂಜೆಯಲ್ಲಿ ದೇವತೆಯನ್ನು ಕರೆದು ಹೊಗಳಿದರೇ ಸಾಲದು; ನಿವೇದಿಸಬೇಕಾದುದನ್ನು ಕ್ರಮವರಿತು ಮಾಡಬೇಕು. ಯಾಗದಲ್ಲಿ ಮುಖ್ಯವಾಗಿ ಉಪಯೋಗವಾಗುವ ಬೆಂಕಿ (ಅಗ್ನಿ) ಮತ್ತು ಉಪಕರಣಗಳು, ಹವಿಸ್ಸು, ಮಾಡಬೇಕಾದ ಕ್ರಮ–ಇವೆಲ್ಲವೂ "ಅಧ್ವರ್ಯು" ಎಂಬ ಋತ್ವಿಕ್ಕಿನ ಪಾಲಿನ ಕೆಲಸಗಳು. ಈ ಅಧ್ವರ್ಯುವಿನ ಕೆಲಸಕ್ಕೆ ಉಪಯುಕ್ತವಾದ ವಿಷಯಗಳನ್ನೊಳಗೊಂಡ ವೇದ ಯಜುರ್ವೇದ; ಇದು 'ಅಧ್ವರ್ಯುವೇದ' ಎಂಬ ಹೆಸರನ್ನೂ ಹೊಂದಿದೆ. ದೇವತೆಗೆ ಹವಿಸ್ಸನ್ನು ಅರ್ಪಿಸಿದಮೇಲೆ ಮನಸ್ಸಂತೋಷಾರ್ಥವಾಗಿ ಹಾಡಬೇಕಷ್ಟೆ. ಈ ಹಾಡುಗಳು 'ಉದ್ಗಾತೃ' ಎಂಬ ಋತ್ವಿಕ್ಕಿನ ಪಾಲಿನವು. ಈ ಹಾಡುಗಳನ್ನೊಳಗೊಂಡಿರುವ ವೇದಭಾಗಕ್ಕೆ "ಸಾಮವೇದ" ಎಂದು ಹೆಸರು. 'ಸಾಮ' ಎಂದರೆ "ಗೀತೆ, ಹಾಡು" ಎಂದು ಅರ್ಥ. ಯಜ್ಞಕ್ಕೆ ಅನೇಕ ವಿಘ್ನಗಳು ಬಂದೊದಗಬಹುದು: ಯಜ್ಞವಿಧಿಯನ್ನು ತಿರಸ್ಕಾರಮಾಡುವ ಅನಾರ್ಯರಿಂದ ಅಥವಾ

ಇತರ ಶತ್ರುಗಳಿಂದ, ಕಡೆಗೆ ಪಿಶಾಚಗಳಿಂದ ಸಹ. ಈ ತೆರದ ಯಾವುದೊಂದು ವಿಘ್ನವೂ ಬರದಿರುವಂತೆ, ಶತ್ರುಸೈನ್ಯವು ಅಳಿದುಹೋಗುವಂತೆ ಅಥವಾ ಅನಾರ್ಯರ ಉಪಟಳ ಅಡಗುವಂತೆ ಹಲಕೆಲವು ಮಂತ್ರಮಾಟಗಳನ್ನು ನಡೆಸಬೇಕಾಯಿತು. ಇವೂ ಮತ್ತು ಹಲಕೆಲವು ದೇವತೆಗಳನ್ನು ಕುರಿತ ಸ್ತುತಿಗಳೂ ಅಥರ್ವವೇದದ ವಸ್ತುವಾಗಿವೆ.[1]

ಇದಿಷ್ಟೂ ಯಜ್ಞದಲ್ಲಿ ಪ್ರಯುಕ್ತವಾಗುತ್ತಿದ್ದ ಸ್ತೋತ್ರ, ಗೀತೆ, ಮಂತ್ರ ಮತ್ತು "ಯಜುಸ್ಸು" (ಹವಿಸ್ಸನ್ನು ಅಗ್ನಿಯಲ್ಲಿ ನಿವೇದಿಸುವ ಮೊದಲು ಉಚ್ಚರಿಸಲೇಬೇಕಾದ ಪದಗಳು; ಉದಾ—ವಷಟ್, ಸ್ವಾಹಾ, ಇತ್ಯಾದಿ)-ಇವುಗಳನ್ನೊಳಗೊಂಡ "ಸಂಹಿತೆ" (ಒಟ್ಟುಗೂಡಿಸಿದವು)ಗಳ ಮಾತಾಯಿತು. ಈ ಯಜ್ಞವಿಧಿ ಬೆಳೆಯುತ್ತ ಬಂದಂತೆ, ಯಜ್ಞಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳೂ ಬೆಳೆಯುತ್ತ ಬಂದುವು. ಯಜ್ಞೋಪಕರಣಗಳು, ಯಜ್ಞಪಶು, ಯಜ್ಞಶಾಲೆಯಲ್ಲಿನ ಏರ್ಪಾಡು, ಋತ್ವಿಕ್ಕುಗಳು, ಯಜ್ಞದ ಅಂತರಾರ್ಥ (ಒಳಗಿನ ಅರ್ಥ). ಯಜ್ಞಮಾಡಿದುದರಿಂದಾದ ಒಳ್ಳೆಯದು, ಯಜ್ಞಮಾಡದುದರಿಂದಾದ ಕೆಟ್ಟದು, ಯಜ್ಞಮಾಡಿ ಒಳ್ಳೆಯದನ್ನು ಪಡೆದವರ ಕಥೆಗಳು—ಇವೆಲ್ಲವೂ ಬೆಳೆಯುತ್ತ ಬಂದು ಬೇರೊಂದು ತೆರನಾದ ವಾಕ್ಯಸಮುದಾಯಗಳ ರಚನೆಗೆ ಕಾರಣವಾಯಿತು. ಹೀಗೆ ಉಂಟಾದ ವಾಕ್ಯಸಮುದಾಯವೇ "ಬ್ರಾಹ್ಮಣಗಳು."

---

1 ಮೊದಲು, ಯಜ್ಞದಲ್ಲಿ ಪ್ರತ್ಯಕ್ಷವಾಗಿ ಉಪಯೋಗವಾಗುತ್ತಿದ್ದ ಋಕ್, ಯಜುಸ್, ಸಾಮವೇದಗಳನ್ನೇ 'ತ್ರಯೀ' (ಮೂರರ ಗುಂಪು) ಎಂದು ವ್ಯವಹರಿಸುತ್ತಿದ್ದರು. ಕಾಲಕ್ರಮೇಣ ಅಥರ್ವವೂ ಒಂದು ವೇದವಾಗಿ ಪರಿಗಣಿತವಾಯಿತು.

ಬ್ರಹ್ಮ ಎಂದರೆ ಯಜ್ಞ ; ಯಜ್ಞಕ್ಕೆ ಸಂಬಂಧಿಸಿದ ವಿಷಯ ವನ್ನೊಳಗೊಂಡ ಭಾಗ ಬ್ರಾಹ್ಮಣ. ಸಾಮಾನ್ಯವಾಗಿ ಈ ಬ್ರಾಹ್ಮಣಗಳೆಲ್ಲವೂ ಗದ್ಯರೂಪವಾಗಿವೆ. ಪ್ರತಿಯೊಂದು ಸಂಹಿತೆಗೂ ಅನೇಕ ಬ್ರಾಹ್ಮಣಗಳು ಸಂಬಂಧಿಸಿವೆ. ಇವುಗಳಲ್ಲಿ ಐತರೇಯ, ತೈತ್ತಿರೀಯ, ಶತಪಥ ಮುಂತಾದ ಕೆಲವು ಬಹಳ ಮುಖ್ಯವಾದುವು.

ಗೃಹಸ್ಥನಾಗಿದ್ದು ಯಜ್ಞಗಳನ್ನು ಮಾಡಿ ಕೃತಕೃತ್ಯನಾದ ಮನುಷ್ಯನು ಮುಪ್ಪು ಸಮೀಪಿಸುತ್ತಲೇ ಅರಣ್ಯಕ್ಕೆ ಹೋಗಿ ಅಲ್ಲಿ ಯಜ್ಞದ ಸ್ವರೂಪ, ಯಜ್ಞಾಂಗಗಳು ಮತ್ತು ಸಾಧನಗಳು, ಇವುಗಳ ಒಳ ಅರ್ಥ, ಸಂವತ್ಸರ, ಋತುಗಳು, ದೇವತೆಗಳ ಸ್ವರೂಪ, ಶಕ್ತಿ ಮುಂತಾದುವನ್ನು ಕುರಿತು ಮನನಮಾಡ ಬೇಕಾಗಿದ್ದಿತು; ಈ ವಿಧವಾದ ಚಿಂತನದಿಂದ ಉಂಟಾದ ಜ್ಞಾನರಾಶಿ "ಆರಣ್ಯಕ"ವೆಂಬ ಹೆಸರನ್ನು ಹೊಂದಿತು.

ಹೀಗೆ ಮೊದಲಾದ ಜ್ಞಾನ ಇನ್ನೂ ವಿಸ್ತರಿಸಿ, ಸೃಷ್ಟಿ, ಜೀವ, ಪ್ರಾಣ, ಈಶ್ವರ, ಪ್ರಪಂಚ, ಜೀವನಿಗೂ ಈಶ್ವರನಿಗೂ ಇರುವ ಸಂಬಂಧ, ಪ್ರಪಂಚಕ್ಕೂ ಜೀವನಿಗೂ ಇರುವ ಸಂಬಂಧ—ಇವುಗಳೆಲ್ಲವನ್ನೂ ಒಳಗೊಂಡ ಒಂದು ದೊಡ್ಡ ಜ್ಞಾನರಾಶಿಯಾಗಿ ಪರಿಣಮಿಸಿತು. ಇದೇ "ಉಪನಿಷತ್ತು." ಇದರಲ್ಲಿನ ವಿಚಾರಗಳು ಆತ್ಮ-ಪ್ರಪಂಚಗಳ, ಜೀವ-ಈಶ್ವರರ ಸಂಬಂಧವನ್ನು ಕುರಿತವಾದುದರಿಂದ, ಎಲ್ಲ ಜನರಿಗೂ ತಿಳಿಯ ಲಾಗದ ತಿಳಿಸಲಾಗದ ರಹಸ್ಯವಾದುದರಿಂದ, ಅತಿ ಸಮೀಪದಲ್ಲಿ ಕುಳಿತು ತಿಳಿಯಬೇಕಾದುದರಿಂದ ಈ ಹೆಸರು ಬಂದಿತು. "ವೇದಾಂತ"ವೆನ್ನುವುದೂ ಈ ಉಪನಿಷತ್ತುಗಳೇ. ವೇದ ಭಾಗಗಳಲ್ಲಿ ಉಪನಿಷತ್ತು ಕೊನೆಯ ಭಾಗವಾದುದರಿಂದಲೂ

ವೇದದ ಪರಮಪ್ರಯೋಜನವಾದ ಬ್ರಹ್ಮಚಿಂತನಕ್ಕೆ ಅದು ಆಧಾರವಾಗಿರುವುದರಿಂದಲೂ ಇದಕ್ಕೆ ವೇದಾಂತ ಎಂಬ ಹೆಸರು ಬಂದಿದೆ.

ಹೀಗೆ "ವೇದ" ಎಂಬ ಪದದ ವ್ಯಾಪ್ತಿ ವಿಶಾಲವಾಗಿದೆ; ಸಂಹಿತೆಗಳು ಮತ್ತು ಅವುಗಳಿಗೆ ಸಂಬಂಧಿಸಿದ ಬ್ರಾಹ್ಮಣಗಳು, ಆರಣ್ಯಕಗಳು ಮತ್ತು ಉಪನಿಷತ್ತುಗಳು— ಇವೆಲ್ಲವನ್ನೂ ಒಳಗೊಂಡಿದೆ. ಮೇಲೆ ತಿಳಿಸಿದ ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳೆಲ್ಲವೂ "ಶ್ರುತ"ವಾದ ಜ್ಞಾನರಾಶಿ"; ಯಾರೊಬ್ಬರೂ ಇವನ್ನು ಬರೆಯಲಿಲ್ಲ. ಪುರುಷಪ್ರಯತ್ನವಿಲ್ಲದೆ ಹುಟ್ಟಿದುವಾದುದರಿಂದ ಇವನ್ನು ಅಪೌರುಷೇಯವೆಂದು ಕರೆಯುವುದು ವಾಡಿಕೆಯಾಗಿದೆ.

ಇನ್ನು ವೇದಕ್ಕೆ ಸಂಬಂಧಿಸಿದ ವಿಷಯಗಳನ್ನೊಳಗೊಂಡ "ವೈದಿಕ" ಅಥವಾ "ಶ್ರೌತ" ಎನಿಸುವ ಗ್ರಂಥಸಮುದಾಯದ ಸೂಕ್ಷ್ಮಪರಿಚಯ ಮಾಡಿಕೊಳ್ಳಬಹುದು. ಈ ಶ್ರೌತ ಗ್ರಂಥಗಳು ಹಲಕೆಲವರಿಂದ ಬರೆಯಲ್ಪಟ್ಟವು. "ಶ್ರೌತ" ಅಥವಾ "ವೈದಿಕ" ಎನ್ನಬಹುದಾದ ಗ್ರಂಥಗಳಲ್ಲಿ ಪ್ರಾತಿಶಾಖ್ಯಗಳು ಮುಖ್ಯವಾದುವು. ಪ್ರಾತಿಶಾಖ್ಯವೆಂದರೆ ಒಂದೊಂದು ಶಾಖೆಗೂ ಸಂಬಂಧಿಸಿದಂತಿರುವ ಒಂದೊಂದು ಗ್ರಂಥ. ವೇದವನ್ನು ಬರೆದಿಡದೆ, ಗುರು ತನ್ನ ಶಿಷ್ಯನಿಗೂ, ಅವನು ತನ್ನ ಶಿಷ್ಯನಿಗೂ ಪರಂಪರೆಯಾಗಿ ಹೇಳಿಕೊಡುತ್ತಿದ್ದುದರಿಂದ, ಬೇರೆ ಬೇರೆ ಗುರುಗಳ ಪರಂಪರೆಗಳಲ್ಲಿ ಹಲಕೆಲವು ವ್ಯತ್ಯಾಸಗಳೂ ಪಾಠಭೇದಗಳೂ ಉಂಟಾಗಿ ಆ ವ್ಯತ್ಯಾಸ ಪಾಠಭೇದಗಳೇ ಬೇರೆ ಬೇರೆ ಶಾಖೆಗಳ ಉತ್ಪತ್ತಿಗೆ ಕಾರಣವಾದುವು. ಒಂದೊಂದು ಪರಂಪರೆಯಲ್ಲಿ ಬಂದವರೂ ತಮ್ಮ

ತಮ್ಮ ಶಾಖೆಯ ವೈಶಿಷ್ಟ್ಯಗಳನ್ನೆಲ್ಲಾ ಒಟ್ಟುಗೂಡಿಸಿ ಬರೆದಿಡುತ್ತ ಬಂದರು. ಹೀಗೆ ಬರೆದಿಟ್ಟವೇ ಪ್ರಾತಿಶಾಖ್ಯಗಳು. ಇವುಗಳಲ್ಲಿ ಸ್ವರದ ವಿಚಾರವೂ ಹಲವು ವ್ಯಾಕರಣಾಂಶಗಳೂ ಕಂಡುಬರುತ್ತವೆ.

ಪ್ರಾತಿಶಾಖ್ಯಗಳಲ್ಲದೆ, ವೈದಿಕಗ್ರಂಥಸಮುದಾಯದಲ್ಲಿ ಶಿಕ್ಷೆ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪ ಎಂಬ ಆರು ವೇದಾಂಗಗಳು ಸೇರುತ್ತವೆ. ಉದಾತ್ತ ಅನುದಾತ್ತ ಸ್ವರಿತಗಳೆಂಬ ಸ್ವರಗಳನ್ನೂ ವರ್ಣಗಳ ಉತ್ಪತ್ತಿ ಸ್ಥಾನಗಳನ್ನೂ ಹ್ರಸ್ವದೀರ್ಘಾದಿ ಪ್ರಯತ್ನಗಳನ್ನೂ ನಿರೂಪಿಸುವುದು "ಶಿಕ್ಷೆ." "ವ್ಯಾಕರಣ"ವು ಪದಸ್ವರೂಪ, ಧಾತು ಪ್ರಕೃತಿ ಪ್ರತ್ಯಯಗಳ ಸ್ವರೂಪ ಮತ್ತು ಕೆಲಸಗಳನ್ನು ಬೋಧಿಸುತ್ತದೆ. ಗಾಯತ್ರೀ, ಅನುಷ್ಟುಪ್, ತ್ರಿಷ್ಟುಪ್, ಜಗತೀ ಮುಂತಾದ ಗುರುಲಘುಗಳ ವಿನ್ಯಾಸದಿಂದ ನಿರ್ಮಿತವಾಗುವ ಪದ್ಯಭಾಗಗಳ ಸ್ವರೂಪವನ್ನು ತಿಳಿಸುವುದು "ಛಂದಸ್ಸು." "ನಿರುಕ್ತ"ವು ಪದಗಳು ಉತ್ಪನ್ನವಾದ ಬಗೆಯನ್ನೂ ಪದಮೂಲವನ್ನೂ ಪದದ ಅರ್ಥದಲ್ಲಿ ಉಂಟಾಗಿರುವ ವ್ಯತ್ಯಾಸಗಳನ್ನೂ ಕುರಿತು ವಿಚಾರಮಾಡುತ್ತದೆ. "ಜ್ಯೋತಿಷ"ದ ಕೆಲಸ ಯಜ್ಞಾದಿಗಳಿಗೆ ಅನುಕೂಲವಾಗುವಂತಹ ಶುಭದಿನ, ವಾರ, ನಕ್ಷತ್ರ, ಗ್ರಹಯೋಗ ಮುಂತಾದುವನ್ನು ತಿಳಿಸುವುದು. "ಕಲ್ಪ"ವೆಂಬ ಪದದಿಂದ "ಶ್ರೌತ", "ಗೃಹ್ಯ" ಮತ್ತು "ಧರ್ಮ" ಸೂತ್ರಗಳೆಲ್ಲವೂ ಒಮ್ಮೆಯೇ ಹೇಳಿದಂತಾಗುವುದು. ಯಜ್ಞಮಾಡುವ ವಿಧಾನ, ಅದಕ್ಕೆ ಬೇಕಾಗುವ ಋತ್ವಿಕ್ಕುಗಳು, ಪಶು, ಯೂಪ, ಸಲಕರಣೆಗಳು ಮುಂತಾದ ವಿಷಯಗಳನ್ನೊಳಗೊಂಡವು ಶ್ರೌತಸೂತ್ರಗಳು. ದಿನದಿನದ ಜೀವನದಲ್ಲಿ ನಡೆಯ

ಬೇಕಾದ ಅಗ್ನಿಹೋತ್ರಾದಿಗಳು, ವಿವಾಹ, ಉಪನಯನ ಮುಂತಾದ ಸಂದರ್ಭಗಳಲ್ಲಿ ಉಪಯುಕ್ತವಾಗುವ ಮಂತ್ರಗಳು, ನಡೆಸಬೇಕಾದ ಕೆಲಸಕಾರ್ಯಗಳು ಇವೇ ಮುಂತಾದ ವಿಷಯಗಳು "ಗೃಹ್ಯ" ಸೂತ್ರಗಳಲ್ಲಿವೆ. "ಧರ್ಮ" ಸೂತ್ರಗಳಲ್ಲಿರುವುದು ಮನುಷ್ಯನು ತನ್ನವರೊಡನೆ ತನ್ನ ಜೀವನವನ್ನು ಸಾಗಿಸಬೇಕಾದ ಮಾರ್ಗ: ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿಗಳು. ತಮ್ಮ ತಮ್ಮ ಆಶ್ರಮದಲ್ಲಿ ನಡೆದುಕೊಳ್ಳಬೇಕಾದ ರೀತಿ, ಬೇರೆ ಬೇರೆ ವರ್ಣದವರ ಆಚಾರ ಶೀಲಾದಿಗಳನ್ನು ಕುರಿತ ವಿಧಿಗಳು; ಎಂದರೆ ಮುಖ್ಯವಾಗಿ ಧರ್ಮದ ಸ್ವರೂಪ.

ಇವಲ್ಲದೆ "ಅನುಕ್ರಮಣಿ"ಗಳೂ ಸಹ ವೈದಿಕಗ್ರಂಥ ಸಮುದಾಯದಲ್ಲಿ ಅಡಕವಾಗುತ್ತವೆ. ಇವುಗಳ ಸ್ವರೂಪವಾದರೂ ಇಷ್ಟೇ. ಪ್ರತಿಯೊಂದು ಸಂಹಿತೆಗೂ ಸಂಬಂಧಿಸಿದಂತೆ ಒಂದೊಂದು ಅನುಕ್ರಮಣಿಯಿದ್ದು ಅವುಗಳಲ್ಲಿ ಆಯಾ ಸಂಹಿತೆಗಳಲ್ಲಿರುವ ವಾಕ್ಯಸಮುದಾಯಗಳ ಸಂಖ್ಯೆ, ಸ್ತುತರಾದ ದೇವತೆಗಳು, ಮಂತ್ರಗಳನ್ನು ಕಂಡುಕೊಂಡ ಋಷಿಗಳು, ಮಂತ್ರಗಳ ಛಂದಸ್ಸು, ಅವುಗಳನ್ನು ಉಪಯೋಗಮಾಡಬೇಕಾದ ಸಂದರ್ಭ (ಅಥವಾ "ವಿನಿಯೋಗ") ಇವೇ ಮುಂತಾದ ವಿಷಯಗಳು ಜ್ಞಾಪಕವಿಡಲು ಅನುಕೂಲವಾಗಿರುವಂತೆ ಹೇಳಿದೆ. ಈ ಮೇಲೆ ಹೇಳಿದ ವೈದಿಕಗ್ರಂಥಗಳು ವೇದದ ಅರ್ಥವನ್ನು ತಿಳಿಯಲು ಆವಶ್ಯಕವಾದ ಸಾಧನಗಳು.

## ೩ ಋಗ್ವೇದಸಂಹಿತ

ವೈದಿಕವಾಙ್ಮಯದ ವಿಸ್ತಾರವನ್ನು ಕುರಿತು ಕೆಲವು ಮಾತುಗಳನ್ನು ಹೇಳಿದುದಾಯಿತು. ಇನ್ನು, ಅತಿ ಪ್ರಾಚೀನವಾದ ಮತ್ತು ಅತಿ ಮುಖ್ಯವಾದ ಋಗ್ವೇದದ ಬಗ್ಗೆ ಆದಷ್ಟು ಮಟ್ಟಿಗೆ ನಿಷ್ಕೃಷ್ಟವಾದ ಪರಿಚಯಮಾಡಿಕೊಡಲಾಗುವುದು. "ಋಕ್" ಎಂದರೆ ದೇವತಾಸ್ತುತಿರೂಪವಾದ ಒಂದು ಪದ್ಯ; ಛಂದೋಬದ್ಧವಾದುದು. ಅನೇಕ ಋಕ್ಕುಗಳ ಸಮುದಾಯ "ಸೂಕ್ತ" ಎನಿಸುವುದು. ಋಗ್ವೇದದಲ್ಲಿ ಇಂತಹ ಸೂಕ್ತಗಳೇ ೧,೦೧೭ (ಖಿಲಸೂಕ್ತಗಳು ೧೧ ಸೇರಿ ೧,೦೨೮) ಇವೆ. ಒಟ್ಟು ಋಕ್ಕುಗಳ ಸಂಖ್ಯೆ ಸುಮಾರು ೧೦,೬೦೦. ಸರಾಸರಿ ಸೂಕ್ತಕ್ಕೆ ೧೦ ಋಕ್ಕುಗಳು. ಬಹಳ ಚಿಕ್ಕ ಸೂಕ್ತವೊಂದರಲ್ಲಿ ಒಂದೇ ಋಕ್ಕಿದೆ; ಬಹಳ ದೊಡ್ಡದರಲ್ಲಿ ೫೮ ಋಕ್ಕುಗಳಿವೆ. ಋಗ್ವೇದವನ್ನು ಎರಡು ರೀತಿಯಲ್ಲಿ ವಿಭಾಗಮಾಡುತ್ತಾರೆ. ಒಂದು, ತೀರ ಯಂತ್ರಕ್ರಮದಲ್ಲಿ ವಿಭಾಗಮಾಡಿದಂತಿದೆ; ಒಟ್ಟು ಋಗ್ವೇದದಲ್ಲಿ ೮ ಅಷ್ಟಕಗಳು, ಒಂದೊಂದು ಅಷ್ಟಕದಲ್ಲೂ ೮ ಅಧ್ಯಾಯಗಳು, ಒಂದೊಂದು ಅಧ್ಯಾಯದಲ್ಲೂ ಅನೇಕ ವರ್ಗಗಳು, ಒಂದೊಂದು ವರ್ಗದಲ್ಲೂ ಒಂದರಿಂದ ಒಂಬತ್ತರವರೆಗೆ ಎಷ್ಟಾದರೂ ಋಕ್ಕುಗಳು–ಇದು ಒಂದು ರೀತಿಯ ವಿಭಜನೆ. ಇದರಲ್ಲಿ ಯಾವ ತತ್ತ್ವವನ್ನು ಅವಲಂಬಿಸಿ ವಿಭಾಗ ನಡೆದಿದೆಯೋ ಹೇಳುವುದು ಕಷ್ಟ; ಮುಖ್ಯವಾಗಿ ಸೌಲಭ್ಯವಿರಬಹುದು. ಇನ್ನೊಂದು ರೀತಿಯ ವಿಭಾಗಕ್ರಮ ಬಹಳ ಹಿಂದಿನ ಕಾಲದಿಂದಲೂ ವಾಡಿಕೆಯಲ್ಲಿದೆ. ಒಟ್ಟು ಋಗ್ವೇದ ೧೦ ಮಂಡಲಗಳಾಗಿ, ಒಂದೊಂದು ಮಂಡಲವೂ ಅನೇಕ ಅನುವಾಕಗಳಾಗಿ, ಒಂದೊಂದು ಅನುವಾಕವೂ ಹಲಕೆಲವು

ಸೂಕ್ತಗಳಾಗಿ ವಿಭಾಗವಾಗಿರುತ್ತದೆ. ಈ ವಿಭಾಗಕ್ರಮದಲ್ಲಿ ಅನುಕೂಲವಿದೆ; ಇದರಿಂದ ಋಗ್ವೇದದ ಬೆಳವಣಿಗೆಯನ್ನು ಪರೀಕ್ಷಿಸುವುದು ಸುಲಭ.

ಋಗ್ವೇದ ಹೇಗೆ ಬೆಳೆದು ಅಚ್ಚುಕಟ್ಟು ಹೊಂದಿತೆಂಬುದನ್ನು ವಿದ್ವಾಂಸರು ಹೇಳಲು ಪ್ರಯತ್ನಪಟ್ಟಿದ್ದಾರೆ. ಎರಡನೆಯ ಮಂಡಲದಿಂದ ಏಳನೆಯ ಮಂಡಲದವರೆಗಿನದು ಅತಿ ಪ್ರಾಚೀನವಾದುದು. ಈ ಒಂದೊಂದು ಮಂಡಲವೂ ಒಬ್ಬೊಬ್ಬ ಋಷಿಯಿಂದ ಮತ್ತು ಅವನ ವಂಶೀಯರಿಂದ ಶ್ರುತವಾದ ಸೂಕ್ತಗಳನ್ನೊಳಗೊಂಡಿದೆ. ೨ರಿಂದ ೭ರ ವರೆಗೆ ಅನುಕ್ರಮವಾಗಿ, ಗೃತ್ಸಮದ, ವಿಶ್ವಾಮಿತ್ರ, ವಾಮದೇವ, ಅತ್ರಿ, ಭರದ್ವಾಜ, ವಸಿಷ್ಠ—ಈ ಋಷಿಗಳ ವಂಶದಲ್ಲಿ ಬಂದ ಸೂಕ್ತಗಳಿವೆ. ಒಟ್ಟುಗೂಡಿಸಿರುವ ರೀತಿಯೂ ಸಹ ಇವೆಲ್ಲದರಲ್ಲೂ ಒಂದೇತೆರನಾಗಿದೆ; ಅಗ್ನಿಯನ್ನು ಸ್ತುತಿಸುವ ಸೂಕ್ತಗಳ ಸಮೂಹ ಮೊದಲು, ಆನಂತರ ಇಂದ್ರನನ್ನುದ್ದೇಶಿಸಿ ಹಾಡಿದಂತಹವು. ಆಮೇಲೆ ಇತರ ದೇವತೆಗಳ ವಿಷಯವಾಗಿ ರಚಿತವಾದವು; ಒಂದೊಂದು ದೇವತೆಯ ವಿಷಯವಾದ ಸೂಕ್ತ ಸಮೂಹದಲ್ಲಿಯೂ ಒಂದೊಂದು ರೀತಿ ಕಂಡುಬರುತ್ತದೆ. ಮೊದಲು ಬಹುಸಂಖ್ಯೆಯ ಋಕ್ಕುಗಳುಳ್ಳ ಸೂಕ್ತ, ಅನಂತರ ಕಡಮೆ ಋಕ್ಕುಗಳುಳ್ಳ ಸೂಕ್ತ, ಕೊನೆಗೆ ಕೆಲವೇ ಋಕ್ಕುಗಳಿರುವ ಸೂಕ್ತ. ಹೀಗೆ ಈ ಮಂಡಲಗಳಲ್ಲಿ ಒಂದು ರೀತಿ ಅಚ್ಚುಕಟ್ಟು ಕಂಡುಬರುತ್ತದೆ. ಇವುಗಳನ್ನು "ಕುಲಮಂಡಲ" ಗಳು ಎನ್ನಬಹುದು. ೮ನೆಯ ಮಂಡಲದಲ್ಲಿನ ಸೂಕ್ತಗಳೆಲ್ಲವನ್ನೂ ಕಣ್ವ ಮತ್ತು ಆತನ ವಂಶೀಯರೇ ಹಾಡಿದವರಾದರೂ, ಅವುಗಳನ್ನು ಒಟ್ಟುಗೂಡಿಸಿರುವ ರೀತಿಯಲ್ಲಿ ತತ್ತ್ವವೇನೊಂದೂ

ಇಲ್ಲ. ೯ನೆಯ ಮಂಡಲದಲ್ಲಿನ ಸೂಕ್ತಗಳೆಲ್ಲವೂ ಸೋಮ ಪವಮಾನ ದೇವತೆಯನ್ನು ಉದ್ದೇಶಿಸಿ ಹಾಡಿದುವು. ಮೊದಲ ನೆಯ ಮಂಡಲ ಮತ್ತು ಹತ್ತನೆಯ ಮಂಡಲಗಳು ಇತ್ತೀಚಿನ ವೆಂದೂ ವೇದವನ್ನು ಒಟ್ಟುಗೂಡಿಸುವ ಕಾಲದವರೆಗೆ ರಚಿತ ವಾಗುತ್ತಿದ್ದವೆಂದೂ ವಿದ್ವಾಂಸರ ಅಭಿಪ್ರಾಯ.

ಋಗ್ವೇದದಲ್ಲಿ ಪ್ರಾಯಶಃ ಬಹುಭಾಗ ಪೂಜೆಗೆ ಸಂಬಂಧ ವಾದ ಮಂತ್ರಸ್ತೋತ್ರಗಳಿವೆ; ಎಲ್ಲೋ ಕೆಲವೇ ಪ್ರಾಪಂಚಿಕ ವಾದ ಇತರ ವಿಷಯಗಳನ್ನು ಕುರಿತು ಉಂಟಾದುವುಗಳು. ಎಲ್ಲ ಸೂಕ್ತಗಳೂ ದೇವತೆಗಳನ್ನು ಕರೆದು, ಸ್ತುತಿಸಿ ಕೊಟ್ಟ ಯಾವುದೇ ಒಂದು ಹವಿಸ್ಸನ್ನು ಸ್ವೀಕರಿಸಿ ಬೇಡಿದ ಬೇಡಿಕೆ ಯನ್ನು ಸಲ್ಲಿಸಲೋಸುಗ ಹಾಡಿದಂತಹವು. ಭಕ್ತನ ಹೃದಯ ದಲ್ಲಿ ದೇವತೆ ತುಂಬಿದ ಎಲ್ಲ ಭಾವನೆಗಳನ್ನೂ ಆದಷ್ಟು ಸುಂದರ ವಾಗಿ, ಉದಾತ್ತವಾಗಿ ಹಾಡಬೇಕೆಂಬುದೇ ಭಕ್ತನ ಪ್ರಯತ್ನ. ಭಾವದಿಂದ ಪರಿಪೂರ್ಣವಾದ ಹೃದಯದಲ್ಲಿ ಹುಟ್ಟಿದ ಮಾತು ಗಳು ಬಹು ಉದಾತ್ತವಾಗಿರುವುದು ಸ್ವಾಭಾವಿಕ; ಅನೇಕ ಸೂಕ್ತಗಳು ಹಾಗೆಯೇ ಉತ್ಪನ್ನವಾದುವು. ಆದರೆ ಇವುಗಳ ಜತೆಯಲ್ಲಿ ಕೆಲವು ನೀರಸವಾದ, ಬೇಸರಗೊಳಿಸುವ, ಅತಿಯಾಗಿ ಕ್ಲಿಷ್ಟವಾದ ಸೂಕ್ತಗಳೂ ಇವೆ. ೧,೦೦೦ ವರ್ಷಗಳ ಕಾಲದಲ್ಲಿ ನಡೆದ ಜ್ಞಾನದ ಒಂದು ಚಳುವಳಿಯಲ್ಲಿ ಕೆಲವು ನೀರಸವಾದ ಮಾತುಗಳೂ ಬಂದಿರಬಹುದು. ಇಂತಹವುಗಳಲ್ಲಿಯೂ ಸಹ– ಕೊಂಚ ಸೂಕ್ಷ್ಮವಾಗಿ ಪರಿಶೀಲಿಸಿದರೆ—ಅರ್ಥಪೂರ್ಣವಾಗಿ ಇರುವ ಒಂದು ಚೆನ್ನು ಕಾಣಬಹುದು.

## ೪ ಋಗ್ವೇದದ ಆರ್ಯರ ದೈವಿಕ ಭಾವನೆ

ಮನುಷ್ಯನು ಆಗತಾನೇ ಜ್ಞಾನದ ತೊಟ್ಟಿಲ ಮೇಲೆ ಕಾಲಿಟ್ಟು ನಿಂತಿದ್ದಾನೆ; ಹಸುಮಗುವಿನ ಮನಸ್ಸಿನಂತೆ ಆತನ ಮನಸ್ಸು; ಅವನ ಜೀವನದ ಒಂದೊಂದು ವ್ಯಾಪಾರವೂ ಆಶ್ಚರ್ಯವನ್ನೂ ಭಯವನ್ನೂ ಆತನ ಹೃದಯದಲ್ಲಿ ಉಂಟುಮಾಡುತ್ತಿದೆ. ಪ್ರಕೃತಿಯ ಒಂದೊಂದು ರೂಪವೂ ಆತನಿಗೆ ಸಹಾಯಕವಾಗಿಯೋ ವಿರೋಧವಾಗಿಯೋ ಇರುತ್ತಾ, ಆತನ ಮನಸ್ಸಿನಲ್ಲಿ ಒಂದು ಧೈರ್ಯವನ್ನೋ ಭೀತಿಯನ್ನೋ ಉತ್ಪತ್ತಿಮಾಡಿದೆ. ಭೂಮಿ ಮತ್ತು ಮಳೆ ಬೆಳೆಗಳನ್ನು ಬೆಳೆದು ಆತನಿಗೆ ಸಹಾಯಮಾಡಿವೆ; ಆದುದರಿಂದ ಅವು ಸಹಾಯಕಗಳು. ಬಿರುಗಾಳಿಯ ರಭಸ ಗುಡುಗು ಸಿಡಿಲುಗಳ ಆರ್ಭಟ ಅವನನ್ನು ನಡುಗಿಸಿವೆ; ಆದುದರಿಂದ ಅವು ಭಯಾನಕಗಳು. ಸೂರ್ಯನು ಬೆಳಗುವಷ್ಟು ಕಾಲವೂ ಎಲ್ಲ ಜೀವಿಗಳೂ ಧೈರ್ಯವಾಗಿ ತಮ್ಮ ತಮ್ಮ ಕೆಲಸಗಳನ್ನು ಮಾಡಿಕೊಂಡು, ಕತ್ತಲೆ ಬಂದೊಡನೆಯೇ ತಮ್ಮ ಗೂಡುಗಳಿಗೆ ಹೋಗಿ ಸೇರಿಕೊಳ್ಳುವುದೂ ಸಹ ಆಗಿನ ಜನರ ಮನಸ್ಸಿನಲ್ಲಿ ದೊಡ್ಡ ಪರಿಣಾಮವನ್ನುಂಟುಮಾಡಿರಬೇಕು. ಕಪ್ಪು ಕೆಂಪು ಬಣ್ಣದ ಹಸುಗಳು ಬಿಳಿಯ ಹಾಲನ್ನು ಕೊಡುವುದೊಂದು ದೊಡ್ಡ ಆಶ್ಚರ್ಯ![1] ಆಕಾಶದಲ್ಲಿ ಸೂರ್ಯ—

---

[1] ಆಸೂಸು ಚಿದ್ಧಿಷೇ ಪಕ್ವಮನ್ತಃ ಪಯಃ ಕೃಷ್ಣಾಸು
ರುಶದ್ರೋಹಿಣೀಷು
[ಮಂ. ೧, ಸೂ. ೬೨, ಋ, ೯]

ಕೃಷ್ಣಾ ಸತೀ ರುಶತಾಧಾಸಿನೈಷಾ ಜಾಮರ್ಯೇಣ ಪಯಸಾ
ಪೀಪಾಯ
[ಮ. ೪, ಸೂ. ೩, ಋ. ೯]

ಕೆಳಗೂರೆಯಿಲ್ಲದೆಯೆ, ದೃಢವಾಗಿ ಕಟ್ಟದೆಯೆ
ಇಳಿಮುಖದಿ ತಾನಿರ್ದು, ಬೀಳದಿರ್ಪನು ಕೆಳಗೆ—
[ಮಂ. ೪, ಸೂ. ೧೩, ಋ. ೫]

ರಾತ್ರಿಯಲ್ಲಿ ಮಿನುಗುವ ನಕ್ಷತ್ರಗಳೆಲ್ಲ ಹಗಲಿನಲ್ಲೆಲ್ಲಿರುವುವು? ಸ್ವಚ್ಛವಾದ ನೀರುಳ್ಳ ನದಿಗಳೆಲ್ಲ ಸಮುದ್ರಕ್ಕೆ ಸೇರಿದರೂ ಸಮುದ್ರ ಏಕೆ ತುಂಬಿ ಕೋಡಿಹರಿಯದಿದೆ? ಹೀಗೆ ಈ ಒಂದೊಂದು ವ್ಯಾಪಾರವೂ ಆಶ್ಚರ್ಯ ಭಯ ಶಂಕೆಗಳಿಂದ ಆಗಿನ ಜನರನ್ನು ತುಂಬಿರಬೇಕು; ಅವರು ಒಂದೊಂದಕ್ಕೂ ಕಾರಣ ವನ್ನೋ ವಿವರಣೆಯನ್ನೋ ಕಂಡುಹಿಡಿಯಲು ಯತ್ನಿಸಿದ ಫಲವಾಗಿ ಒಂದೊಂದು ವ್ಯಾಪಾರಕ್ಕೂ ಒಬ್ಬೊಬ್ಬ ವ್ಯಕ್ತಿ ನಿಯಾಮಕನಾಗಿದ್ದಿರಬಹುದೆಂಬ ಕಲ್ಪನೆ ಅವರಿಗೆ ಬರಲು ಅವಕಾಶವಾಯಿತು. ಅಲ್ಲದೆ ತಮ್ಮ ಸುತ್ತಮುತ್ತಲಿನಲ್ಲಿ ನಡೆಯುವ ಎಲ್ಲ ಪ್ರಕೃತಿವ್ಯಾಪಾರಗಳೂ ಒಂದು ಕ್ರಮ, ರೀತಿ, ನಿಯಮ-ಇವುಗಳಿಗೆ ಕಟ್ಟುಬಿದ್ದು ತಿರುತಿರುಗಿ ನಡೆಯುತ್ತಿರು ವುದೂ, ಅವರ ಮನಸ್ಸಿನಲ್ಲಿ ಈ ಕಲ್ಪನೆಯು ಬೇರೂರುವಂತೆ ಮಾಡಿರಬೇಕು. ಈ ವ್ಯಾಪಾರಗಳಿಗೂ ಅವುಗಳ ನಿಯಾಮಕ ರಿಗೂ ಏನೊಂದೂ ವ್ಯತ್ಯಾಸವೇ ತೋರದು. ಹೀಗೆ ಒಂದೊಂದು ವ್ಯಾಪಾರಕ್ಕೂ ಒಬ್ಬೊಬ್ಬ ನಿಯಾಮಕ ನಾದಂತಾಯಿತು ಈ ನಿಯಾಮಕರೇ ದೇವತೆಗಳು. ಸುಡುವ ಬೆಳಗುವ, ಆಹಾರವನ್ನು ಬೇಯಿಸುವ ಬೆಂಕಿ "ಅಗ್ನಿ" ದೇವತೆ; ಹಗಲಲ್ಲಿ ಎಲ್ಲ ಕಡೆ ಬೆಳಕನ್ನು ಬೀರುವವನು "ಸೂರ್ಯ' ದೇವತೆ; ಮೇಲೆ ದೇದೀಪ್ಯಮಾನವಾಗಿ ಪ್ರಕಾಶಿಸುತ್ತಿರುವುದು "ದ್ಯೌಃಪಿತಾ"; ಕೆಳಗೆ ಹಚ್ಚನೆ,ಹುಲ್ಲು ಪೈರು ಬೆಳೆಸಿ ದನಕರು ಗಳ ಮತ್ತು ಜನರ ಆಹಾರವನ್ನು ಸಿದ್ಧಗೊಳಿಸುವುದು

“ಪೃಥಿವೀ ಮಾತಾ”; ಜನರಲ್ಲಿ ಹುರುಪುಂಟುಮಾಡಿ ಸುಜ್ಞಾನವನ್ನು ಕೊಡುವವನು “ಸವಿತೃದೇವ”; ಎಲ್ಲೆಡೆಯೂ ತಾನಿದ್ದು ಕೆಟ್ಟ ಕೆಲಸ ಮಾಡುವವರನ್ನೆಲ್ಲ ಕ್ರೂರವಾದ ಶಿಕ್ಷೆಗೊಳಪಡಿಸುವವನು “ವರುಣ”; ಕಾಲದೆಣಿಕೆಗೆ ಸಿಕ್ಕುವಂತೆ ಮಾಡುವವನು “ಮಾಃ”[1]. ಹೀಗೆಯೇ ಅನೇಕ ದೇವತೆಗಳ ಭಾವನೆ ಆತನ ಮನಸ್ಸಿಗೆ ಬಂದಿತು. ಈ ದೇವತೆಗಳಲ್ಲಿ ಕೆಲವರು ಒಳ್ಳೆಯವರು, ಕೆಲವರು ಬಹಳ ಕೋಪಿಗಳು. ಒಳ್ಳೆಯವರನ್ನು ಸ್ತುತಿಸಿ ಒಳ್ಳೆಯದನ್ನು ಪಡೆಯಬೇಕು; ಕೋಪಿಷ್ಠರನ್ನು ಅಂಗಲಾಚಿ ಬೇಡಿಕೊಂಡು ಅಭಯಪ್ರಸಾದಗಳನ್ನು ಪಡೆಯಬೇಕು: ಇಷ್ಟೇ ಆಗಿನ ಜನರ ಮನೋಭಿಲಾಷೆ. ಮನುಷ್ಯರಂತೆ ದೇವತೆಗಳೂ ಸಹ ಸ್ತೋತ್ರಕ್ಕೆ ಮರುಳಾಗಿ ಸ್ತುತಿಮಾಡಿದವನ ಇಷ್ಟಾರ್ಥವೆಲ್ಲವನ್ನೂ ನೆರವೇರಿಸುವರೆಂದು ಅವರಿಗೆ ದೃಢವಾದ ನಂಬಿಕೆಯಿದ್ದಿರಬೇಕು. ಸುಖವಾಗಿ ಇರುವುದಕ್ಕೆ, ಕಷ್ಟಬಂದಾಗ ಕೈನೀಡಿ ಸಹಾಯ ಮಾಡಲು, ಶಕ್ತಿಯಲ್ಲಿ ಜ್ಞಾನದಲ್ಲಿ ಎಲ್ಲದರಲ್ಲೂ ತನಗಿಂತ ಮಿಗಿಲಾದ ದೇವತೆಗಳ ವರಪ್ರಸಾದ ಬೇಕು. ಕಷ್ಟನೀಗಲೂ ಎಳ್ಳಷ್ಟೂ ಬಂಧುಗಳು ಸ್ನೇಹಿತರು ಶಕ್ತರಲ್ಲ; ದೇವತೆಯ ಶಕ್ತಿಗೆ ಭೂಮಿಯಲ್ಲೊಬ್ಬರೂ ಇದಿರಿಲ್ಲ. ದೇವತೆಯ ದಯೆಯಷ್ಟು ದಯೆ ಇನ್ನಾರಿಗೂ ಇಲ್ಲ. ಆದುದರಿಂದ ದೇವತೆಗಳೇ ಗತಿಯೆಂದು ಅವರನ್ನು ಬಹುವಾಗಿ ಪ್ರಾರ್ಥಿಸಿದ್ದಾನೆ.

---

[1] ಚಂದ್ರ—‘ಮಾಃ’ ಎಂಬ ಶಬ್ದದಿಂದ ಮಾಸ ಎಂಬುದು ಉತ್ಪನ್ನವಾಗಿದೆ. ಹೀಗೆಯೇ ಕನ್ನಡದಲ್ಲಿನ “ತಿಂಗಳು” ಎಂಬ ಪದ ಕಾಲಮಾನವನ್ನು ತೋರಿಸುವುದಲ್ಲದೆ ಚಂದ್ರ ಎಂಬರ್ಥವನ್ನೂ ಸೂಚಿಸುವುದು ತಿಳಿದ ವಿಷಯ.

ಈ ವರಪ್ರಸಾದ ಅನುಗ್ರಹಗಳು ಅವನಿಗೆ ಲಭಿಸುವುದೆಂತು? ಏನೊಂದು ಪ್ರಯತ್ನ ಮಾಡದೆ ದೇವತೆಗಳ ಸಹಾಯ ಲಭಿಸದು; ಸೋಮಾರಿಗಳು ದೇವತೆಗಳಿಗೆ ಪ್ರಿಯರಾಗರು; ಸೋಮರಸವನ್ನು ಹಿಂಡಿ, ಯಾವಾಗಲೂ ಸ್ತುತಿಮಾಡುತ್ತ ಶ್ರದ್ಧೆಯಿಂದ ಯಾಗಮಾಡುವವನನ್ನು ಕಂಡರೆ ಅವರಿಗೆ ತುಂಬ ಪ್ರೀತಿ; ತನ್ನ ದೇವತೆ ತನ್ನಂತೆಯೇ ತನಗಿಷ್ಟನಾದ ವಸ್ತುಗಳನ್ನು ಅಪೇಕ್ಷಿಸಿ ಪ್ರೀತಿಸುವುದೆಂಬುದು ಭಕ್ತನ ಮನೋಭಾವ. ಆದುದರಿಂದಲೇ ಯಾಗದಲ್ಲಿ ಹವಿಸ್ಸನ್ನೂ ಸೋಮರಸವನ್ನೂ ಯಥೇಚ್ಛವಾಗಿ ಬಹು ಸಂತೋಷದಿಂದ ಭಕ್ತನು ದೇವತೆಗೋಸ್ಕರ ಕೊಡುತ್ತಾನೆ; ಕೊಡುತ್ತಾ ದೇವತೆಯನ್ನು ಇನ್ನೂ ಸಂತುಷ್ಟಿಗೊಳಿಸಲೋಸುಗ ಹಾಡಿ ಹೊಗಳುತ್ತಾನೆ. ಮಗ ತಂದೆಯ ಬಳಿ ಹೋಗಿ ಬೇಡುವಂತೆ ಬೇಡುತ್ತಾನೆ; ಮುಗಿಲು ಮುಟ್ಟುವಂತೆ ಹಾಡುತ್ತಾನೆ; ಮಗು ತಾಯಿ ತನ್ನನ್ನೆತ್ತಿಕೊಳ್ಳಬೇಕೆಂದು ಮೊರೆಯಿಡುವಂತೆ ದೇವರಲ್ಲಿ ಮೊರೆಯಿಡುತ್ತಾನೆ. ದೇವತೆ ದಯೆಗೈದರೆ ತನಗೆ ಬೇಕಾದುದೆಲ್ಲವನ್ನೂ ಕೊಡುವನೆಂಬ ಭಕ್ತಿ ದೃಢವಾಗಿದೆ. ಗೋಧನ, ಧನಸಮೃದ್ಧಿ, ವೀರರಾದ ಮಕ್ಕಳು, ಆರೋಗ್ಯ, ದೀರ್ಘಾಯಸ್ಸು, ಜನರಲ್ಲಿ ಸಮ್ಮಾನ, ಸಂಕಟಗಳಿಂದ ರಕ್ಷಣೆ, ಯುದ್ಧದಲ್ಲಿ ಜಯ, ಶತ್ರುವಿನ ವಿನಾಶ, ತುಂಬ ಕೊಳ್ಳೆ—ಎಲ್ಲ ಬೇಕು; ಎಲ್ಲವನ್ನೂ ದೇವತೆಯೇ ಕೊಡಬೇಕು. ಗೃತ್ಸಮದನೆಂಬ ಋಷಿ ಇಂದ್ರನನ್ನು ಕುರಿತು—

ಕೊಡು, ದೇವ, ಕೊಡು ನನಗೆ ಧನಗಳಲಿ ಉತ್ತಮವ,
ಸನ್ಮತಿ ಸಮೃದ್ಧಿಗಳನು
ಅಪರಿಮಿತಧನವನ್ನು, ಶಾಶ್ವತಾರೋಗ್ಯವನು
ವಾಗ್ಮಿತೆಯ, ಶುಭದಿವಸಗಳನು—

[ಮಂ. ೨, ಸೂ. ೨೧, ಋ. ೬]

ಎಂದು ಬೇಡಿದ್ದಾನೆ. ಇನ್ನೊಬ್ಬ ಭಕ್ತನು ಕಷ್ಟದಲ್ಲಿ ನೊಂದು ಮನೆದೇವರಿಗೆ ಮೊರೆಯಿಡುತ್ತಾನೆ: ತಂದೆ ತಾತಂದಿರ ಸ್ತುತಿಯನ್ನು ಒಪ್ಪಿಕೊಂಡ ದೇವತೆ; ತನಗೇ ಹಿಂದೆ ಅನೇಕಬಾರಿ ಸಹಾಯಮಾಡಿದವನು; ತನ್ನ ಮತ್ತು ತನ್ನವರ ಯಾಗದಲ್ಲಿ ಹವಿಸ್ಸನ್ನೊಪ್ಪಿಕೊಂಡ ಮಹನೀಯ; ಸ್ತುತಿಯಿಂದ ಸಂತೋಷ ಹೊಂದುವವನು; ಕರೆದರೆ ಬಾರನೇ? "ಪದೇಪದೇ ನಾನು ಕರೆದರೆ, ಜಯಶಾಲಿ ಇಂದ್ರ ನನ್ನ ಪ್ರಾರ್ಥನೆಯನ್ನು ಕೇಳಿ, ನನ್ನ ಆಕಾಂಕ್ಷೆಗಳನ್ನು ಪೂರ್ಣಮಾಡುವನು;" ಮೊರೆಯಿಟ್ಟರೆ ದೇವತೆ ಇಂದಿನ ಎಲ್ಲ ಪಾಪಗಳನ್ನೂ ಪರಿಹರಿಸುವನು ಎಂಬುದು ಭಕ್ತನ ನಂಬಿಕೆ. ಒಬ್ಬ ಭಕ್ತ ತನ್ನ ದೇವನಿಗೆ ಹೀಗೆ ಹೇಳಿದ್ದಾನೆ: "ನಿನ್ನ ಹಾಗೆ, ಓ ಇಂದ್ರ, ನಾನು ಧನಕ್ಕೆಲ್ಲಕ್ಕೂ ಒಡೆಯನಾಗಿದ್ದಿದ್ದರೆ, ನನ್ನ ಭಕ್ತನು ಆಕಳ ಹಿಂಡು ತನ್ನದೆಂದೆನಲು ಏನೊಂದೂ ಕೊರತೆಯಿರದಂತೆ ಮಾಡುತ್ತಿದ್ದೆ; ವರಗಳನ್ನು ಕರುಣಿಸುತ್ತಿದ್ದೆ; ಬೇಕಾದುದೆಲ್ಲ ಕೊಡುತ್ತಿದ್ದೆ; ಓ ಬಲಶಾಲಿ ಇಂದ್ರ, ನಿನ್ನಂತೆ ನಾನು ಗೋವುಗಳ ಅಧಿಪತಿಯಾಗಿ ಇದ್ದಿದ್ದರೆ."[1] ಇನ್ನೊಬ್ಬ ಭಕ್ತ—

ನೀನು ಮರ್ತ್ಯನಾಗಿ, ಓ ಅಗ್ನಿ, ನಾನಮರನಾಗಿರೆ,
ಮಿತ್ರನೊಲು ಶಕ್ತಿಪುತ್ರ, ಯಾಗಕೊಳ್ಳದೇವ,
ಕಷ್ಟಕೊಳಗಾಗಿಸದೆ ನಿನ್ನ—ಓ ಸುದೇವ,
ನನ್ನ ಭಕ್ತಗೆಂದಿಗೂ ಇರದು ಬಡತನ—ಇರದದಕ್ಷ್ಣ ಸಂಕಟ.[2]

ಎಂದು ಹೇಳಿದ್ದಾನೆ. ಅಂತೂ ದೇವತೆಯ ಕೈಯಲ್ಲಿದೆ ಭಕ್ತನ ಇಷ್ಟಸಂಪೂರ್ತಿ.

---

[1] ಮಂ. ೮, ಸೂ. ೧೪. ಋ. ೧ ಮತ್ತು ೨.

[2] ಮಂ. ೮, ಸೂ. ೧೯, ಋ. ೨೫ ಮತ್ತು ೨೬.

ಹೀಗೆ ಬರಬರುತ್ತ ಕೊಟ್ಟ ಹವಿಸ್ಸಿಗೆ ಪ್ರತಿಫಲವನ್ನು ನಿರೀಕ್ಷಿಸುವ ಭಾವನೆ ಬರಲಾರಂಭವಾಯಿತು. "ಇಗೋ ದೇವ, ನಿನಗಿದನು ಕೊಡುವೆ. ಕೊಡು ನನಗೆ ನಾ ಕೇಳಿದುದನು" ಎಂಬ ಮಾತು ಮೇಲಿಂದಮೇಲೆ ಅನೇಕ ಸೂಕ್ತಗಳಲ್ಲಿ ಕಂಡು ಬರುತ್ತದೆ. ದೇವತೆಗಳು ಮಾಡಬೇಕಾದ ಪ್ರತಿಯೊಂದು ಕೆಲಸಕ್ಕೂ ಮನುಷ್ಯನು ಮಾಡುವ ಯಜ್ಞಗಳೇ ಸಾಮರ್ಥ್ಯವನ್ನು ತಂದುದರಿಂದ ದೇವತೆ ಭಕ್ತನ ಅಧೀನ; ಅದರಲ್ಲೂ ತಂದೆ ತಾತಂದಿರ ಕಾಲದಿಂದ ಯಜ್ಞವಿಧಿಯನ್ನೂ ಸ್ತೋತ್ರಗೀತೆಗಳನ್ನೂ ತಿಳಿದ ಪುರೋಹಿತನ ಅಧೀನ. ಹೀಗೆ ಉಳಿದೆಲ್ಲರೂ ಯುದ್ಧದಲ್ಲಿ ತೊಡಗಿರುವಾಗ. ವ್ಯವಸಾಯ ವಾಣಿಜ್ಯಗಳಲ್ಲಿ ಉದ್ಯುಕ್ತರಾಗಿರುವಾಗ. ಮನೆಯ ಸಂಪ್ರದಾಯಗಳು ಉಳಿಯುವುದು ಯಾರ ದೆಸೆಯಿಂದ? ಪುರೋಹಿತನಿಂದಲ್ಲವೆ? ಹಿಂದಿನ ನೀತಿರೀತಿಗಳನ್ನುಳಿಸಿಕೊಂಡು, ಇಂದಿನವರ ಶುಭಸಂತೋಷಗಳಿಗೋಸ್ಕರ ದೇವತೆಗಳನ್ನು ಕರೆದು ಪೂಜಿಸಿ ಬೇಡುವುದಕ್ಕೆ ಪುರೋಹಿತನನ್ನು ಬಿಟ್ಟರೆ ಬೇರೆ ಯಾರು? ಪುರೋಹಿತನ ಉತ್ಕರ್ಷ ಉಂಟಾಯಿತು. ದೇವತೆಗಳಿಗೂ ಕೂಡ ಒಬ್ಬ ಪುರೋಹಿತ ಬೇಕು: 'ಅಗ್ನಿ'[1] ಕ್ರಮೇಣ ಪುರೋಹಿತನ ಕರ್ತವ್ಯವೇ ಒಂದು ದೇವತೆಯಾಗಿ ಭಾವಿಸಲ್ಪಟ್ಟಿತು; "ಬೃಹಸ್ಪತಿ" ಅಥವಾ "ಬ್ರಹ್ಮಣಸ್ಪತಿ"[2]ಯ ಆವಿರ್ಭಾವವಾಯಿತು.

---

[1] ಮಂ. ೧, ಸೂ. ೧, ಋ. ೧.

[2] ಬ್ರಹ್ಮ ಎಂದರೆ ಸ್ತುತಿ, ಮಂತ್ರ, ಯಜ್ಞ, ಇವುಗಳ ಒಡೆಯ ಬ್ರಹ್ಮಣಸ್ಪತಿ.

## ೫ ಮುಖ್ಯರಾದ ಕೆಲವು ದೇವತೆಗಳು

ದೇವತೆಗಳ ಭಾವನೆ ಬಂದುದು ಹೀಗೆ: ಈ ದೇವತೆಗಳು ಸಂಖ್ಯೆಯಲ್ಲಿ ಮೂವತ್ತುಮೂರು:[1] ಭೂಮಿಯಲ್ಲಿ ಹನ್ನೊಂದು, ಅಂತರಿಕ್ಷದಲ್ಲಿ ಹನ್ನೊಂದು, ಅಂತರಿಕ್ಷದ ಮೇಲೆ "ದ್ಯೌಃ" ಎಂಬ ಸ್ವರ್ಗದಲ್ಲಿ ಹನ್ನೊಂದು. ಈ ಲೆಕ್ಕದಲ್ಲಿ ಮರುತ್ತುಗಳೇ ಮುಂತಾದ ದೇವತೆಗಳ ಗುಂಪು ಸೇರಿಲ್ಲ. ಇವರೆಲ್ಲರೂ ಒಂದೇ ಕಾಲದಲ್ಲಿ ಹುಟ್ಟಲಿಲ್ಲ; ಕೆಲವರು ಬಹಳ ಹಳಬರು, ಇನ್ನು ಕೆಲವರು ಅವರ ಮಕ್ಕಳು. ದೇವತೆಗಳು ಸೋಮರಸವನ್ನು ಕುಡಿದು ಅಮೃತತ್ವವನ್ನು ಪಡೆದರು. ಇವರ ಆಕಾರ, ಆಚಾರ ಎಲ್ಲವೂ ಮನುಷ್ಯರಂತೆಯೇ: ಸೂರ್ಯನಿಗೆ ಅನೇಕ ಕೈಗಳು, ಅಗ್ನಿಗೆ ಅನೇಕ ನಾಲಗೆಗಳು. ಇಂದ್ರ ಯುದ್ಧಕ್ಕೆ ಸನ್ನದ್ಧನಾಗಿದ್ದಾನೆ: ಅಗ್ನಿ ಬೃಹಸ್ಪತಿಗಳು ಪುರೋಹಿತರು. ಮನುಷ್ಯರಿಗೆ ಪ್ರಿಯವಾದ ತುಪ್ಪ, ಹಾಲು, ಧಾನ್ಯ, ಮಾಂಸಗಳು ದೇವತೆಗಳಿಗೂ ಪ್ರಿಯ. ಇವರಲ್ಲಿ ಪ್ರಧಾನವಾದ ಗುಣ ಶಕ್ತಿ; ಪ್ರಕೃತಿಯ ಕ್ರಮವನ್ನು ನೋಡಿಕೊಳ್ಳುವುದು ಇವರ ಪಾಲಿಗೆ ಬಿದ್ದ ಕೆಲಸ. ದಯಾಪೂರ್ಣರೂ ಜ್ಞಾನಸಂಪನ್ನರೂ ಆದ ಇವರಲ್ಲಿ ಮೋಸ ಲೇಶವೂ ಇಲ್ಲ. ಶಕ್ತಿ, ಜ್ಞಾನ, ಕಾಂತಿ, ದಯೆ ಮುಂತಾದ ಸುಗುಣಗಳು ಎಲ್ಲ ದೇವತೆಗಳಲ್ಲಿಯೂ ಸಾಮಾನ್ಯವಾಗಿರುವುದರಿಂದ ಇಬ್ಬಿಬ್ಬರು ದೇವತೆಗಳು ಒಟ್ಟಿಗೆ ಸ್ತುತರಾಗುತ್ತಾರೆ. ಉದಾ. — ಮಿತ್ರಾವರುಣ, ದ್ಯಾವಾಪೃಥಿವೀ,

---

[1] ಋಗ್ವೇದದ ಮೂವತ್ತುಮೂರು ದೇವತೆಗಳು ಯಾವಾಗ ಮೂವತ್ತುಮೂರು ಕೋಟಿ ದೇವತೆಗಳಾದರು ಎಂಬ ಪ್ರಶ್ನೆ ತುಂಬ ಕುತೂಹಲವನ್ನುಂಟುಮಾಡದಿರದು.

ಇತ್ಯಾದಿ. ಕ್ರಮೇಣ ಎಲ್ಲ ಗುಣಗಳೂ ಎಲ್ಲ ದೇವತೆಗಳಲ್ಲೂ ಇರುವುದರಿಂದ ಎಲ್ಲವನ್ನೂ ಒಂದೇ ಎಂದೂ ಭಾವಿಸುವುದೂ ಸಹಜ. ಹೀಗೆ ಅದಿತಿ ಮತ್ತು ಪ್ರಜಾಪತಿ ಎಂಬ ದೇವತೆಗಳಲ್ಲಿ ಎಲ್ಲ ದೇವತೆಗಳೂ ಅಡಗಿದ್ದಾರೆ ಎಂಬುದರಿಂದ,—ಒಬ್ಬನೇ ದೇವರು, ಹಲವು ಹೆಸರು ಎಂಬ ಭಾವನೆ ಬಂದುದು ಕಂಡು ಬರುತ್ತದೆ—

ಇಂದ್ರಂ ಮಿತ್ರಂ ವರುಣಮಗ್ನಿಮಾಹು–
 ರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ ।
ಏಕಂ ಸದ್ವಿಪ್ರಾ ಬಹುಧಾ ವದ–
 ನ್ತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥[1]

ಹೀಗೆ ಒಬ್ಬನೇ ಪರದೇವತೆ, ದೇವರು ಎಂಬ ಭಾವದಿಂದ ಪ್ರಕೃತಿಯೇ, ವಿಶ್ವವೇ ದೇವರು ಎಂಬ ಭಾವನೆ ಉತ್ಪನ್ನ ವಾಗುವುದು ಬಹು ಬೇಗ. ಮುಂದೆ ಉಪನಿಷತ್ತುಗಳಲ್ಲಿ ಪ್ರತಿಪಾದಿತ ವಾಗುವ ಪರಬ್ರಹ್ಮದ ಆರಂಭ ಇಲ್ಲಾಗಲೇ ಕಂಡುಬರುತ್ತದೆ. ಹೀಗೆ ಅನೇಕ ದೇವತಾತತ್ತ್ವದಿಂದ ಏಕದೇವತ್ವಭಾವ ತಾನಾಗಿಯೇ ಬೆಳೆದು ಕೊನೆಗೆ ವಿಶ್ವದೇವತ್ವತತ್ತ್ವದಲ್ಲಿ ಕೊನೆಗೊಳ್ಳುತ್ತದೆ.

ಋಗ್ವೇದದ ದೇವತೆಗಳಲ್ಲಿ ಮೊದಲನೆಯವನು ಇಂದ್ರ. ಅದರ ಸೂಕ್ತಗಳಲ್ಲಿ ಬಹುಭಾಗ ಇಂದ್ರನನ್ನು ಸ್ತುತಿಸುವಂತಹವು; ಒಟ್ಟಿನಲ್ಲಿ ಸುಮಾರು ಕಾಲುಭಾಗದಷ್ಟು ಇಂದ್ರನಿಗೆ ಸಂಬಂಧ ಪಟ್ಟುವು. ಎಲ್ಲ ದೇವರ ಸ್ತುತಿಗಿಂತ, ಇಂದ್ರನ ಸ್ತುತಿ ಋಗ್ವೇದ ದಲ್ಲಿ ಬಹುವಾಗಿದೆ. ಜನತೆಯ ದೇವ ಇಂದ್ರ; ಪರಮ ಸಾಹಸಿ;

---

[1] ಮಂ. ೧, ಸೂ. ೧೬೪, ಋ. ೪೬.

ವೃತ್ರ, ಶುಷ್ಣ, ಅಹಿ ಮುಂತಾದವರನ್ನೆಲ್ಲ ತಂದಿಕ್ಕಿ ಜನರಿಗೆ ನೀರು ದೊರಕುವಂತೆ ಮಾಡಿದವನು. ತಾನೇ ಶೂರ; ಅಲ್ಲದೆ ಯುದ್ಧಗಳಲ್ಲಿ ಆರ್ಯರಿಗೆ ಜಯವನ್ನು ಕರುಣಿಸುವವನು. ಆದುದರಿಂದಲೇ ಈತನ ಉತ್ಕರ್ಷ. ಇವನ ಆಕಾರ ದೊಡ್ಡದು; ಸೋಮವನ್ನು ಕುಡಿದು ಪವಡೆ ಗಡ್ಡಗಳನ್ನಲ್ಲಾಡಿಸುವನು; ಒಮ್ಮೆ ವೃತ್ರನನ್ನು ಕೊಲ್ಲುವಾಗ ಒಟ್ಟಿಗೆ ಮೂರು ಕೊಳ ಸೋಮರಸವನ್ನು ಹೀರಿದನೆಂಬುದರಿಂದ ಹೊಟ್ಟೆಯ ಅಳತೆ ತಿಳಿಯುತ್ತದೆ. ತಲೆಯ ಕೂದಲು ಗಡ್ಡ ಎಲ್ಲಾ ಕಂದುಬಣ್ಣ. ಇವನ ಎರಡು ತೋಳುಗಳು ಮಹಾಬಲವುಳ್ಳವು. ಕೈಯಲ್ಲಿ ವಜ್ರ—ಸಿಡಿಲು; ಈ ಆಯುಧವನ್ನು ಮಾಡಿಕೊಟ್ಟವನು ತ್ವಷ್ಟೃ—ದೇವತೆಗಳ ಕಮ್ಮಾರ; ಕಬ್ಬಿಣದಿಂದ ಅಥವಾ ಕೆಲವು ಸಲ ಚಿನ್ನದಿಂದ ಮಾಡಿದ ಆಯುಧ; ಬಹು ಹರಿತವಾದುದು ಮತ್ತು ಅನೇಕ ಮೊನೆಗಳುಳ್ಳದ್ದು. ಕಂದುಬಣ್ಣದ ಕುದುರೆಗಳನ್ನು ಕಟ್ಟಿದ ರಥದಲ್ಲಿ ಕುಳಿತು ಯುದ್ಧಮಾಡುತ್ತಾನೆ; ಈ ರಥ ಈ ಕುದುರೆಗಳನ್ನು ಮಾಡಿಕೊಟ್ಟವರು ಋಭುಗಳೆಂಬ ದೇವಶಿಲ್ಪಿಗಳು—ಸ್ವರ್ಗದ ಬಡಗಿಗಳು. ಇಂದ್ರನಂತೆ ಸೋಮವನ್ನು ಕುಡಿದ, ಕುಡಿಯಬಲ್ಲ ದೇವತೆ ಇನ್ನೊಬ್ಬನಿಲ್ಲ; ಆದ್ದರಿಂದಲೇ ಅಡಿಗಡಿಗೆ ಇವನಿಗೆ "ಸೋಮಪಾ" ಎಂಬ ವಿಶೇಷಣ. ಈ ಸೋಮರಸ ಈತನಿಗೆ ಸಾಹಸದ ಕಾರ್ಯಗಳನ್ನು ಮಾಡುವುದಕ್ಕೆ ಉತ್ಸಾಹ ಕೊಟ್ಟಿತಂತೆ! ವೃತ್ರನನ್ನು ಕೊಲ್ಲುವ ಮುನ್ನ ಮೂರು ಕೊಳ ಸೋಮರಸವನ್ನು ಒಮ್ಮೆಯೇ ಹೀರಿದುದನ್ನು ಹಿಂದೆಯೇ ತಿಳಿಸಿದೆ. ಇನ್ನೊಂದೆಡೆ ಅತಿಯಾಗಿ ಸೋಮರಸವನ್ನು ಕುಡಿದು ಮತ್ತನಾಗಿ ಇಂದ್ರನು ತನ್ನ ಸಾಹಸವನ್ನೂ ಪರಾಕ್ರಮವನ್ನೂ ವರ್ಣಿಸುತ್ತ ಜಂಭಹೊಡೆಯುವ ದೃಶ್ಯ

ಕಂಡುಬರುತ್ತದೆ.[1] ಇಂದ್ರನ ತಂದೆ "ದ್ಯೌಃ"; ಕೆಲವೆಡೆ ತ್ವಷ್ಟ್ರವೇ ತಂದೆಯೆಂಬಂತೆ ಕಾಣುತ್ತದೆ. ಅಗ್ನಿಪೂಷರು ಇಂದ್ರನ ಸಹೋದರರು. ಇಂದ್ರಾಣೀ ಇಂದ್ರನ ಹೆಂಡತಿ. ಮರುತ್ತುಗಳು ಇಂದ್ರನಿಗೆ ಯುದ್ಧದಲ್ಲಿ ಸಹಾಯವಾಗುವ ಮಿತ್ರರು, ಅನುಯಾಯಿಗಳು. ಇಂದ್ರನನ್ನೂ ಅಗ್ನಿಯನ್ನೂ ಅನೇಕ ಸಲ ಒಟ್ಟಿಗೆ ಸ್ತುತಿಸಿರುವುದೂ ಉಂಟು; ಕೆಲವು ಸಲ ಇಂದ್ರನ ಸಂಗಡ ವರುಣ, ವಾಯು, ಸೋಮ, ಬೃಹಸ್ಪತಿ, ಪೂಷನ್ ಇವರೂ ಸಹ ಸ್ತುತರಾಗುತ್ತಾರೆ. ಇಂದ್ರನ ಆಕಾರ ದೊಡ್ಡದೆಂದು ಹಿಂದೆಯೇ ತಿಳಿಸಿದೆ; ಇವನ ಬಲವೂ ಹಾಗೆಯೇ; ದೇವತೆಗಳಲ್ಲಾಗಲಿ ಮನುಷ್ಯರಲ್ಲಾಗಲಿ ಯಾರೊಬ್ಬರೂ ಇವನ ಬಲವಿಷ್ಟೇ ಎಂದು ಅರಿತವರಲ್ಲ; ಯಾವೊಬ್ಬ ದೇವತೆಯೂ ಇಂದ್ರನಷ್ಟು ಬಲಶಾಲಿಯಲ್ಲ; ಆದ್ದರಿಂದಲೇ "ಶಕ್ರ", "ಶಚೀವಾನ್", "ಶಚೀಪತಿ"[2] ಇಂದ್ರನ ಬಲ ವೀರ್ಯಪರಾಕ್ರಮಗಳು ಮೂರು ಲೋಕದಲ್ಲಿ ಎಲ್ಲಿಯೂ ಕಾಣವು. ಇಂದ್ರನ ಸಾಹಸಕಾರ್ಯಗಳೇ ವಸ್ತುವಾದ ಅನೇಕ ಕಥೆಗಳು, ಐತಿಹ್ಯಗಳು ವೇದದಲ್ಲಿ ಹೇಳಲಾಗಿವೆ. ಇಲ್ಲಿ ಒಂದೆರಡನ್ನು ಮಾತ್ರ ಕೊಡಲಾಗುವುದು.

ಸೋಮಪಾನಮಾಡಿ, ಆವೇಶಗೊಂಡ ಇಂದ್ರನು ಮರುತ್ತುಗಳೊಡನೆ ಹೊರಟು ವೃತ್ರನೆಂಬ ಹೆಸರಿನ ಅಸುರನನ್ನು ಹೊಡೆಯಹೋಗುವನು. ವೃತ್ರ ನೀರನ್ನೆಲ್ಲ ಸೆರೆಹಿಡಿದು ಕಟ್ಟಿದ್ದನೆಂಬುದೇ ಇದಕ್ಕೆ ಕಾರಣ. ಯುದ್ಧ ಪ್ರಾರಂಭವಾದೊಡನೆಯೇ

---

[1] ಮಂ. ೧೮, ಸೂ. ೧೧೯.

[2] "ಶಚೀ" ಎಂಬ ಪದ ಶಕ್ತಿಯೆಂಬ ಅರ್ಥದಲ್ಲಿದ್ದು, ಕ್ರಮೇಣ 'ಇಂದ್ರಾಣಿ'ಯ ಹೆಸರಾಯಿತು.

ವೃತ್ರ ಗರ್ಜನೆಮಾಡಲು ಭೂವ್ಯಂತರಿಕ್ಷಗಳು ತಲ್ಲಣಿಸಿ ಕಂಪಿಸಿದುವು; ದೇವತೆಗಳು ಕಂಗೆಟ್ಟು ಚೆದರಿದರು; ಇಂದ್ರನ ತಾಯಿ ಬೆದರಿದಳು. ಇಂದ್ರನು ಸ್ತೋತ್ರಮಾಡುತ್ತಿದ್ದವರ ಸ್ತುತಿಗಳಿಂದಲೂ, ಪದೇಪದೇ ಸೋಮಪಾನದಿಂದಲೂ, ಯಜ್ಞದ ಹವಿಸ್ಸಿನಿಂದಲೂ ಉತ್ಸಾಹಿತನಾಗಿ ತ್ವಷ್ಟೃ ಮಾಡಿಕೊಟ್ಟಿದ್ದ ವಜ್ರವನ್ನು ವೃತ್ರನ ಮೇಲೆ ಪ್ರಯೋಗಿಸಿದನು. ಅಜೇಯ ತಾನೆಂದು ತಿಳಿದಿದ್ದ ವೃತ್ರ ಇಂದ್ರನೊಡನೆ ಕಾದಲಾರದೆ ಬೀಳುವನು. ವೃತ್ರ ಬಿದ್ದೊಡನೆ ನೀರು ಉಕ್ಕಿ ಹೊರಗೆ ಹರಿದು ಬರುವುದು. "ಅಹಿ" ಎಂಬ ಸರ್ಪವನ್ನೂ ಹೀಗೆಯೇ ವಜ್ರಾಯುಧದಿಂದ ಕೊಂದುದು ಋಗ್ವೇದದ ಅನೇಕ ಸೂಕ್ತಗಳಲ್ಲಿ ಕಂಡುಬರುತ್ತದೆ. ಈ ಎಲ್ಲ ಕಾಳಗಗಳಲ್ಲಿಯೂ ವಜ್ರ, ಪರ್ವತ, ನದಿ, ನೀರು—ಇವುಗಳು ಪದೇಪದೇ ಕಂಡುಬರುತ್ತವೆ. ಅಂದರೆ, ಇಂದ್ರ ಅಂತರಿಕ್ಷದಲ್ಲಿ ಯುದ್ಧಮಾಡಿ ಮೋಡಗಳೆಂಬ ಪರ್ವತಗಳಲ್ಲಿ[1] ಅಡಗಿಕೊಂಡಿರುವ ನೀರನ್ನು ಬಿಡಿಸಿ ಮಳೆಯ ರೂಪದಲ್ಲಿ ಜನರ ಸುಖಕ್ಕೋಸ್ಕರ ಕೊಟ್ಟನೆಂಬುದು ಈ ರೀತಿ ಚಿತ್ರಿತವಾಗಿವೆ. ಈ ಮೋಡಗಳಿಂದ ಮಳೆ ಕರೆದುದೇ ಇನ್ನೊಂದು ತೆರನಾಗಿ ಚಿತ್ರಿತವಾಗಿದೆ. ವಲನೆಂಬ ರಾಕ್ಷಸನ ಭೃತ್ಯರಾದ ಪಣಿಗಳೆಂಬವರು ಬೃಹಸ್ಪತಿಯ ಗೋವುಗಳನ್ನು ಕದ್ದೊಯ್ದು ಗುಹೆಗಳಲ್ಲಿ ಬಚ್ಚಿಟ್ಟರು. ಇದನ್ನು ಬೃಹಸ್ಪತಿಯಿಂದ ತಿಳಿದು ಇಂದ್ರನು ತನ್ನ ದೂತಿಯಾದ "ಸರಮಾ" ಎಂಬ ದೇವಲೋಕದ ನಾಯಿಯನ್ನು ಅಲ್ಲಿಗೆ ಕಳುಹಿಸುವನು. ಸರಮೆಯು ಅಲ್ಲಿಗೆ ಬಂದು ಗೋವುಗಳು ಬಂಧಿತವಾಗಿರುವುದನ್ನು ಕಂಡಿತು.

---

1 ಯಾಸ್ಕನ ನಿರುಕ್ತದಲ್ಲಿ ಪರ್ವತವೆಂಬುದು ಮೇಘದ ಒಂದು ಹೆಸರೆಂಬುದು ಕಂಡುಬರುತ್ತದೆ.

ಆಗ ಪಣಿಗಳು ಬಂದು ಸರಮೆಯೊಡನೆ ಮಾತುಕತೆ ನಡೆಸಲು ಉಪಕ್ರಮಿಸಿ, ಹೇಗಾದರೂ ತಮ್ಮ ಕಡೆ ಸೇರಿಸಿಕೊಂಡು ಬಿಡಬೇಕೆಂದು ಯತ್ನಮಾಡಿದರು. ಈ ಪ್ರಯತ್ನವೆಲ್ಲ ವಿಸ್ತಾರವಾಗಿಯೂ ಸುಂದರವಾಗಿಯೂ ಚಿತ್ರಿತವಾಗಿದೆ.[1] ಸರಮೆ ಪಣಿಗಳ ಮಾತಿಗೆ ಕಿವಿಗೊಡದೆ ಇಂದ್ರನಿಗೆ ಗೋವುಗಳಿರುವ ಸ್ಥಳವನ್ನು ತಿಳಿಸಿತು. ಇಂದ್ರ ವಜ್ರಾಯುಧದೊಡನೆ ಬಂದು, ವಲವನ್ನೂ ಪಣಿಗಳನ್ನೂ ಕೊಂದು ಗೋವುಗಳನ್ನು ಬಿಡಿಸಿ ತಂದನು.

ಕಾಳಗದಲ್ಲಿ ಜಯ ಕೊಡುವವನು ಇಂದ್ರ: ಅನಾರ್ಯರನ್ನೆಲ್ಲ ಆರ್ಯರ ದಾಸರನ್ನಾಗಿ ಮಾಡುವವನು ಇಂದ್ರ; ಶತ್ರುಸೇನೆಯು ನಾಶವಾಗಲು ಸಹಾಯಮಾಡುವವನು ಇಂದ್ರ; ವೀರರ ದೇವ ಇಂದ್ರ. ಸುದಾಸನೆಂಬ ಭೂಲೋಕದ ದೊರೆಗೆ ಸಹಾಯಕನಾಗಿದ್ದು ಅವನ ಶತ್ರುಗಳನ್ನೆಲ್ಲ ನಿಗ್ರಹಿಸಿ ಜಯ ತಂದುಕೊಟ್ಟನೆಂದು ಒಂದು ಸೂಕ್ತದಲ್ಲಿ ಕಾಣಬರುತ್ತದೆ. ಸಾಹಸ, ವೀರ್ಯ, ಅದ್ಭುತಕಾರ್ಯ—ಇವೇ ಇವನ ಮುಖ್ಯಗುಣಗಳು. ಭಕ್ತ ಕೇಳಿದರೆ ಕೇಳಿದುದನ್ನೆಲ್ಲಾ ಕೊಡುವಂತಹವನು; ತುಂಬ ತಿನ್ನುವುದು, ತುಂಬ ಕುಡಿಯುವುದು, ಭ್ರಾತೃಹತ್ಯ—ಇವೆಲ್ಲವೂ ಇವನ ವಿಶೇಷಗುಣಗಳು. ತಂದೆಯಾದ ತ್ವಷ್ಟೃವನ್ನೇ ಕೊಂದನೆಂದು ಸಹ ಒಂದೆಡೆ ಹೇಳಿದೆ. "ವೃತ್ರಘ್ನ"ನಾದ ವೇದದ ಇಂದ್ರನು, ಪುರಾತನ ಪಾರಸೀಕರ "ವೆರೆತ್ರಘ್ನ"ನಾಗಿದ್ದು ವಿಜಯಾಭಿಮಾನದೇವತೆಯಾಗಿರುವುದು ಗಮನಿಸಬೇಕಾದ ಅಂಶ. ಇಂದ್ರನ ಸಾಹಸವನ್ನೂ ವೀರ್ಯವನ್ನೂ ವರ್ಣಿಸುವ ಒಂದು ಸೂಕ್ತದ ಭಾಷಾಂತರವಿದು:

---

[1] ಮಂ. ೧೦, ಸೂ. ೧೦೮.

ಹುಟ್ಟಿದೊಡನೆಯೆ ದೇವದೇವ ತೇಜಸ್ಸಿನಿಂ
ಎಲ್ಲ ದೇವರನೆಲ್ಲ ಪ್ರಜ್ಞೆಯಲಿ ಮೀರಿದನೊ,
ಯಾರ ಗಾಂಭೀರ್ಯವನು, ಯಾರ ವೀರ್ಯವ ಕಂಡು
ಜಗವೆರಡು ಕಂಪಿಸಿತೊ—
ಅವನು, ಓ ಜನರೆ, ಅವನು ಇಂದ್ರ.

ಕಂಪಿಸುವ ವಿಸ್ತಾರ ಭೂಮಿಯನು ಸ್ಥಿರಗೈದ
ಕ್ಷುಬ್ಧಪರ್ವತಗಳನು ಪ್ರಶಮಿಸಿದನು
ಅಂತರಿಕ್ಷವನೆಲ್ಲ ತನ್ನ ದಾಪಿನೊಳಳೆದ
ಆಗಸವ ಹಿಡಿದೆತ್ತಿದ—
ಅವನು, ಓ ಜನರೆ, ಅವನು ಇಂದ್ರ.

ಅಹಿಯ ತರಿದಿಕ್ಕಿ ತಾ ಸಪ್ತಸಿಂಧುವ ಬಿಡಿಸಿ
ವಲನ ಗುಹೆಯಿಂ ಗೋವ ಬಿಡಿಸಿತಂದ
ಬಂಡೆಯೆರಡರ ನಡುವೆ ಬೆಂಕಿಯನು ತಾ ತಂದ
ಯುದ್ಧದಲಿ ಜಯಶಾಲಿ—
ಅವನು, ಓ ಜನರೆ, ಅವನು ಇಂದ್ರ.

ಭೀಕರತನವನನ್ನು “ಎಲ್ಲಿಹನು” ಎನ್ನುವರು,
“ಅವನಿಲ್ಲ” ಎನ್ನುವರು ಕೆಲರವನ ಕುರಿತು
ಅರಿಯ ಧನವನು ಜೂಜ ಪಣದಂತೆ ಕರಗಿಸುವ
ನಂಬಿಸೈ ಅವನ—
ಅವನು, ಓ ಜನರೆ, ಅವನು ಇಂದ್ರ.

ಇವನನುಗ್ರಹವಿರದೆ ಯುದ್ಧದಲಿ ಜಯವಿಲ್ಲ
ಕಾದುತಲಿ ಜನರಿವನ ಸ್ತುತಿಗೈವರು,
ಆವ ಶತ್ರುವಿಗಾದರಿವನು ಸಮನೆನಿಸುವನು
ಚಲಿಸದುದ ಚಲಿಸುವನು—
ಅವನು, ಓ ಜನರೆ, ಅವನು ಇಂದ್ರ.

ಪರ್ವತದಿ ಅಡಗಿರ್ದ ಶಂಬರನ ಕೊಂದನೋ—
ನಾಲ್ವತ್ತು ಶರದಗಳು ಕಳೆಯಲಾಗ—
ಬಿದ್ದಿದ್ದ ದಾನವನ ಅಹಿಯ ತರಿದಿಕ್ಕಿದನೊ
ಕಾಳಗದಿ ವೀರನವ—
ಅವನು, ಓ ಜನರೆ, ಅವನು ಇಂದ್ರ.[1]

ಇಂದ್ರನೊಡನಿರುವವನು "ಬೃಹಸ್ಪತಿ" ಅಥವಾ "ಬ್ರಹ್ಮಣಸ್ಪತಿ"; ಪುರೋಹಿತಕರ್ಮದ ದೇವತೆಯಿವನು; ಸ್ತೋತ್ರಗಳಿಗಧಿದೇವತೆ; ಈತನ ಸ್ತೋತ್ರಗಳಿಂದಲೇ ಇಂದ್ರನಿಗೆ ಬಲ ಬಂದು ವೃತ್ರ ಅಹಿ ಶಂಬರರನ್ನು ಕೊಲ್ಲುವಂತಾದುದು; ಇವನು ಶ್ರದ್ಧೆ ಇಲ್ಲದವರನ್ನೂ ದೇವತೆಗಳನ್ನು ತೆಗಳುವವರನ್ನೂ ಅನಾರ್ಯರನ್ನೂ ನಾಶಗೊಳಿಸುವವನು; ಈತನ ಅನುಗ್ರಹ ವಿದ್ದರೆ ಯುದ್ಧದಲ್ಲಿ ಜಯ, ಶಾಂತಿ, ಲಾಭ, ಶಕ್ತಿ, ಧನ, ಪುತ್ರರು—ಎಲ್ಲವೂ ದೊರೆಯುವುವು. ದೇವತೆಗಳಿಗೆ ಹವಿಸ್ಸು ಬರುವಂತೆ ಮಾಡುವವನು ಇವನು; ಮನುಷ್ಯರು ಸ್ತೋತ್ರಗಳನ್ನೂ ಹವಿಸ್ಸನ್ನೂ ಕೊಡುವಂತೆ ಮಾಡುವವನೂ ಇವನೇ. ಎಲ್ಲೆಡೆ ವ್ಯಾಪಿಸಿ, ಎಲ್ಲರಿಗೂ ಶುಭವನ್ನು ತಂದುಕೊಡುವ ಪುರೋಹಿತನಿವನು.

ಪ್ರಮುಖ ದೇವತೆಗಳಲ್ಲಿ ಎರಡನೆಯ ದೇವತೆ ಅಗ್ನಿ: ಸುಮಾರು ೨೦೦ ಸೂಕ್ತಗಳಾದರೂ ಅಗ್ನಿದೇವನನ್ನು ಸ್ತೋತ್ರ ಮಾಡುವಂತಹವು. ಅಗ್ನಿ ಬೆಂಕಿಗೆ ಅಧಿಷ್ಠಾತೃದೇವತೆ; ಸ್ವರ್ಗದಲ್ಲಿ ಹುಟ್ಟಿ, ಮಿಂಚಿನಲ್ಲಿ ಬಂದು ಅಡಗಿ ಹುದುಗಿ ಕೊಂಡವನು: ಭೃಗುವಂಶದವರಿಗೋಸ್ಕರ ಮಾತರಿಶ್ವನೆಂಬ

[1] ಮಂ. ೨, ಸೂ. ೧೨, ಋ. ೧, ೨, ೩, ೫, ೯ ಮತ್ತು ೧೧.

ದೇವತೆ[1] ಅಗ್ನಿಯನ್ನು ತಿರುಗಿ ಕರೆತಂದನು. ಅಂದಿನಿಂದೀಚೆಗೆ ಎರಡು ಅರಣಿಗಳನ್ನು ಒಂದರ ಜತೆಯಲ್ಲಿನ್ನೊಂದನ್ನು ಇಟ್ಟು ಚೆನ್ನಾಗಿ ಮಸೆಯುವುದರಿಂದ—ಇಲ್ಲಿ ಭೂಮಿಯಲ್ಲಿಯೇ ಅಗ್ನಿಯನ್ನು ಉತ್ಪಾದನ ಮಾಡುವುದು ರೂಢಿಗೆ ಬಂತು. ಆದುದರಿಂದಲೇ ಅಗ್ನಿಗೆ ಅರಣಿಗಳು ಮಾತಾಪಿತೃಗಳು. ಅರಣಿಗಳನ್ನು ಬಲವಾಗಿ ಉಜ್ಜಿ ಅಗ್ನಿಯನ್ನು ಉತ್ಪಾದನಮಾಡಬೇಕಾದುದರಿಂದ ಅಗ್ನಿಗೆ "ಸಹಸಃಸುತಃ" ಎಂದರೆ ಶಕ್ತಿಯಿಂದ ಜನಿಸಿದವನು ಎಂಬ ಹೆಸರು ಬಂದಿದೆ. ಅಗ್ನಿಗೆ ಕೆಂಪುಗಡ್ಡ, ಚಿನ್ನದ ಹಲ್ಲುಗಳು, ಏಳು ನಾಲಗೆಗಳು; ಮುಖವನ್ನು ಎಲ್ಲ ಕಡೆ ತಿರುಗಿಸಬಲ್ಲನು. ಗುಟುರು ಹಾಕುವ ಎತ್ತಿನಂತೆ, ಕೊಂಬುಗಳುಳ್ಳವನು; ಹುಟ್ಟಿದಾಗ ಕರುವಿನಂತೆ ಇರುವವನು; ಇವನು ದೇವತೆಗಳನ್ನು ಯಜ್ಞಶಾಲೆಗೆ ಕರೆದೊಯ್ಯುವ ಕುದುರೆ; ಯಜ್ಞ ಮಾಡುವವನು ತುಪ್ಪವನ್ನೋ ಬೆಣ್ಣೆಯನ್ನೋ ಹಾಕಿದೊಡನೆಯೇ ಕುದುರೆಯಂತೆ ನೆಗೆಯುತ್ತ ಕೆನೆಯುತ್ತ ಹಾರುವನು; ಹಾಗೆಯೇ ಸಮಿತ್ತು ಧಾನ್ಯಗಳನ್ನೆಲ್ಲ ತಿನ್ನುವವನು. ಇವನ ಆಕಾರ ಬಹು ಸುಂದರವಾದುದು: ಯಾವ ಕಡೆ ನೋಡಿದರೂ ದೇದೀಪ್ಯಮಾನನಾಗಿರುವನು; ಸೂರ್ಯನಂತೆ ಉಷಸ್ಸಿನಂತೆ ಕಾಮನಬಿಲ್ಲಿನಂತೆ ಪ್ರಕಾಶವುಳ್ಳವನು. ರಾತ್ರಿಯಲ್ಲಿ ಸಹ ತನ್ನ ತೇಜಸ್ಸಿನಿಂದ ಕತ್ತಲೆಯನ್ನು ಹೊಡೆದೋಡಿಸುವನು. ಆದರೆ, ಇವನು ಹೋದ ದಾರಿ ಕಪ್ಪು; ಕಾಡುಗಳನ್ನು ಸುಟ್ಟು, ಕ್ಷೌರಿಕನು ಗಡ್ಡವನ್ನು ನುಣ್ಣಗೆ ಮಾಡುವಂತೆ ಭೂಮಿಯನ್ನೆಲ್ಲಾ ನುಣ್ಣಗೆ ಮಾಡುವನು. ಈತನ ಕೆಂಪು

[1] ಪ್ರಾಚೀನ ಗ್ರೀಕರ ಪುರಾಣಗಳಲ್ಲಿ ಪ್ರೊಮಿಥಿಯಸ್ ಎಂಬಾತನು ಬೆಂಕಿಯನ್ನು ಸ್ವರ್ಗದಿಂದ ಭೂಮಿಗೆ ಕರೆತಂದನೆಂದು ಹೇಳಿದೆ.

ಹೊಗೆ ಆಕಾಶಕ್ಕೇಳುವುದು; ಹೊಗೆಯ ಕಂಬದಿಂದ ಆಕಾಶವನ್ನು ಹಿಡಿದೆತ್ತಿರುವನು. ಈತನ ರಥ ಚಿನ್ನದಿಂದ ಮಾಡಿದುದು; ಕುದುರೆಗಳು ಕೆಂಪು ಮತ್ತು ಕಂದುಬಣ್ಣದವು. ಯಜ್ಞ ಸಾರಥಿಯಿವನು, ದೇವತೆಗಳನ್ನೆಲ್ಲಾ ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಯಜ್ಞಶಾಲೆಗೆ ಕರೆತರುವನು. ದೇವತೆಗಳಲ್ಲಿ ಅತಿ ಹಳಬ; ಆದರೂ ದಿನದಿನವೂ ಉದಿಸುವವನು, ಆದಕಾರಣ ಚಿಕ್ಕವನು.

ಮನುಷ್ಯನಿಗೆ ಅಗ್ನಿಗಿಂತ ಸಹಾಯಕನಾದವನು ಬೇರೊಬ್ಬನಿಲ್ಲ; ಆದುದರಿಂದಲೇ ಅಗ್ನಿ "ಗೃಹಪತಿ"; ದಿನದಿನವೂ ಬರುವ "ಅತಿಥಿ". ಮರ್ತ್ಯರ ನಡುವೆ ವಾಸಮಾಡುವ ಅಮರ್ತ್ಯ (ದೇವತೆ). ಇವನೊಬ್ಬನೇ ಮನುಷ್ಯನಿಗೆ ಅತಿ ಸಮೀಪ ಬಂಧು; ಕೆಲವು ವೇಳೆ ತಂದೆ, ಇನ್ನು ಕೆಲವು ಸಲ ಸಹೋದರ, ಕೆಲಬಾರಿ ಮಗನೆಂದೂ ಸಹ ವರ್ಣಿತನಾಗಿದ್ದಾನೆ. ಯಜ್ಞಯಾಗಾದಿಗಳೆಲ್ಲವೂ ಅಗ್ನಿಯಲ್ಲೇ ನಡೆಯಬೇಕಾದುದರಿಂದ ಅಗ್ನಿ ದೇವತೆಗಳಿಗೆ 'ಋತ್ವಿಕ್' 'ಪುರೋಹಿತ'; ಅನೇಕ ವೇಳೆ 'ಹೋತೃ', 'ಅಧ್ವರ್ಯು', 'ಬ್ರಹ್ಮ' ಎಂಬ ಋತ್ವಿಕ್ಕುಗಳೂ ಅಗ್ನಿಯೇ ಆಗಿರುತ್ತಾನೆ. ಇಂದ್ರ ಹೇಗೆ ಯೋಧಾಗ್ರಣಿಯೋ ಹಾಗೆ ಅಗ್ನಿ ಪುರೋಹಿತಾಗ್ರಣಿ. ಅಗ್ನಿಗೆ ಯಜ್ಞಸಂಬಂಧವಾದುದೆಲ್ಲವೂ ತಿಳಿದಿದೆ; ಆದುದರಿಂದಲೇ ಅವನು "ಜಾತವೇದಾಃ". ತನ್ನನ್ನು ಸ್ತುತಿಸಿ ಪೂಜಿಸಿದವರಿಗೆಲ್ಲ ವಿವಿಧವಾದ ವರಗಳನ್ನು ಕರುಣಿಸುವನು; ಮುಖ್ಯವಾಗಿ, ಸುಖ, ಸಂತಾನ ಮತ್ತು ಸಮೃದ್ಧಿಗಳನ್ನು ಕೊಡುವ ಮತ್ತು ಕೆಟ್ಟ ಭೂತಗಳನ್ನೂ ಮಾಟ ಮಂತ್ರಾದಿಗಳನ್ನೂ ಹೊಡೆದೋಡಿಸುವ ಶಕ್ತಿ ಅಗ್ನಿಗುಂಟು. ಮಾತರಿಶ್ವನು ಸ್ವರ್ಗಲೋಕ

ದಿಂದ ಅಗ್ನಿಯನ್ನು ತಂದುದನ್ನು ಹಿಂದೆಯೇ ತಿಳಿಸಿದೆ. ನೀರಿನ ಒಳಗಿರುವ ಬೆಂಕಿ ಅಗ್ನಿಯ ಒಂದು ರೂಪ–'ಅಪಾಂ ನಪಾತ್'– ನೀರಿನ ಮಗ; ಇನ್ನೊಂದು ರೂಪ ದಿನವೂ ಮನೆಗಳಲ್ಲಿ ಕಾಣುವ ಸಾಧಾರಣ ಸ್ವರೂಪ; ಸ್ವರ್ಗಲೋಕದಲ್ಲಿ ಮಿಂಚುಗಳಲ್ಲಿರುವುದು ಮತ್ತೊಂದು ರೂಪ: ಇದೇ 'ತ್ರಿತಾ'–ಅಗ್ನಿಯ ಮೂರನೆಯ ರೂಪ; ಹೀಗೆ ಅಗ್ನಿಗೆ ಮೂರು ರೂಪಗಳು. ಸ್ವರ್ಗದಲ್ಲಿ ಹುಟ್ಟಿ ಇದ್ದು, ಭೂಮಿಯಲ್ಲಿ ಮತ್ತೆ ಹುಟ್ಟಿದುದರಿಂದ ಇವನಿಗೆ 'ದ್ವಿಜನ್ಮಾ' ಎಂದೂ, ದಿನದಿನವೂ ಅನೇಕ ಮನೆಗಳಲ್ಲಿ ಮತ್ತೆ ಮತ್ತೆ ಹುಟ್ಟುವುದರಿಂದ ಅನೇಕ ಜನ್ಮವುಳ್ಳವನೆಂದೂ ಸಹ ಹೆಸರು ಬಂದಿದೆ. ಅಗ್ನಿಯ ಶಕ್ತಿ ಸಾಮರ್ಥ್ಯ ಬಹು ದೊಡ್ಡದು. ಅಗ್ನಿದೇವತೆಯ ವಿಷಯ ಹೇಳಿ ಮುಗಿಸುವ ಮುನ್ನ ಋಗ್ವೇದದ ಮೊಟ್ಟಮೊದಲನೆಯ ಸೂಕ್ತದಿಂದ ಒಂದೆರಡು ಋಕ್ಕುಗಳನ್ನು ಕೆಳಗೆ ಕೊಟ್ಟಿದೆ:—

ಅಗ್ನಿಯನು ಸ್ತುತಿಸುವೆ ಪುರೋಹಿತನನು
ಯಜ್ಞದಾ ದೇವನನು ಋತ್ವಿಜನನು
ಹೋತೃವನು ಬಹುರತ್ನದಾತಾಗ್ರಗಣ್ಯನನು.

ಹಿಂದಿನಾ ಋಷಿವರ್ಯರಿಂದ ಸಂಸ್ತುತನು
ಇಂದಿನಾ ಋಷಿಗಳಿಂ ಪೂಜೆಗೊಂಡವನು
ಅವನು ದೇವರನೆಲ್ಲ ಇಲ್ಲಿ ಕರೆತರಲಿ.

ಅಗ್ನಿಯಿಂ ಧನವಹುದು
ಪುಷ್ಟಿ ದಿನದಿನವು
ಯಶವು ವೀರಕುಮಾರರು—

. . . . . . .

ಓ ಅಗ್ನಿ, ಪಿತನಂತೆ ಪುತ್ರನಿಗೆ
ಹತ್ತಿರವೆ ಜೀಸಿರುತ ಸುಲಭವಾಗಿ
ನಮ್ಮ ಶುಭಕೋಸುಗವೆ
ನವೊಮ್ಮಡನೆ ವಾಸಿಸುತ
ವರ್ಧಿಸುತ್ತಿರು, ನೀನು, ಓ ದೇವ, ಅಗ್ನಿ—[1]

ಯಜ್ಞಕ್ಕೆ ಉಪಯೋಗವಾಗುವ ಈ ಅಗ್ನಿ ವೇದಗಳ ಕಾಲಕ್ಕಿಂತ ಬಹಳ ಹಿಂದೆಯೇ ಬಹಳ ಮುಖ್ಯವಾದ ಸ್ಥಾನವನ್ನು ಹೊಂದಿದ್ದಿರಬೇಕು; ಆಗಲೇ ಬೆಂಕಿಯನ್ನು ದೇವತೆಯೆಂದು ಭಾವಿಸುವ ಕುರುಹುಗಳು ಕಂಡುಬರುತ್ತವೆ. ಏಕೆಂದರೆ ಪ್ರಾಚೀನ ಗ್ರೀಕರಲ್ಲಿಯೂ ರೋಮನರಲ್ಲಿಯೂ ಅಗ್ನಿಯಲ್ಲಿ ಹೋಮಮಾಡುವುದು ಪದ್ಧತಿಯಾಗಿತ್ತು. ಇರಾನಿಯರಲ್ಲಂತೂ ಅಗ್ನಿಯಲ್ಲಿ ಹೋಮಮಾಡುವುದು ಅತಿ ಮುಖ್ಯವಾದ ಕರ್ತವ್ಯವಲ್ಲದೆ, ಅಗ್ನಿಯೇ ದೊಡ್ಡ ದೇವನೆಂದು ಪೂಜಿತನಾಗಿದ್ದಾನೆ. ಎಂದರೆ, ಇತರ ದೇವತೆಗಳಿಗೋಸ್ಕರ ಅಗ್ನಿಯಲ್ಲಿ ಹೋಮ ಮಾಡುವುದು ಬಹಳ ಪುರಾತನವಾದ ಸಂಪ್ರದಾಯವೆನ್ನುವುದು ಕಾಣುತ್ತದೆ.

ಋಗ್ವೇದದಲ್ಲಿ ಅತ್ಯುದಾತ್ತನಾದ ದೇವತೆಯೆಂದರೆ ವರುಣ. ಧರ್ಮದ ಮೂಲ ವರುಣ; ನಿಯಮದ ಅಧಿಕಾರಿ ವರುಣ; ವರುಣನಿಂದ ಜಗತ್ತಿನ ಕ್ರಮ ನಿರಂತರವೂ ಸಾಗಿದೆ. ವರುಣನ ಶರೀರ, ರೂಪಗಳು ಇಂದ್ರನ ದೇಹರೂಪಗಳಂತೆ ಚಿತ್ರಿತವಾಗಿಲ್ಲ. ವರುಣನ ಗುಣಗಳು ಪ್ರಧಾನವಾಗಿ ಧಾರ್ಮಿಕ, ಮಾನಸಿಕ, ನೈತಿಕ. ಇಂದ್ರನ ಗುಣಗಳಾದರೋ ಕೇವಲ ದೈಹಿಕ, ವೀರ ಕರ್ಮೋಚಿತ. ಆದುದರಿಂದಲೇ ವೇದದ ಎಲ್ಲ ದೇವತೆಗಳಿಗಿಂತ

---

[1] ಮಂ. ೧, ಸೂ. ೧, ಋ. ೧, ೨, ೩ ಮತ್ತು ೯.

ಬಹಳ ಉನ್ನತವಾದ ಸ್ಥಾನದಲ್ಲಿರುವನು ವರುಣ. ಈ ದೇವತೆ ಸರ್ವಜ್ಞ, ಸರ್ವಶಕ್ತ, ಸತ್ಪುರುಷರ ರಕ್ಷಕ, ದುಷ್ಟನಿಗ್ರಹಿ, ಧರ್ಮದೇವತೆ, ಅತ್ಯುದಾತ್ತ, ಪರಮದಯಾಮಯ.

ಲೋಕದಲ್ಲಿ ನಡೆಯುವ ಪ್ರತಿಯೊಂದು ವ್ಯಾಪಾರವೂ ಒಂದು ನಿಯಮಕ್ಕೊಳಪಟ್ಟಿದೆ; ಯಜ್ಞಾದಿಕರ್ಮಗಳ ಪ್ರತಿ ಫಲವೂ ಒಂದು ನಿಯಮವನ್ನನುಸರಿಸಿ ಬರುತ್ತದೆ; ಹಗಲು ರಾತ್ರಿಗಳು ಋತುಗಳು ಮಳೆ ಬೆಳೆ ಇವೆಲ್ಲವೂ ಒಂದು ನಿಯಮ ವನ್ನನುಸರಿಸಿಯೇ ಉಂಟಾಗುತ್ತವೆ. ಒಳ್ಳೆ ಕೆಲಸದಿಂದ ಒಳ್ಳೆಯ ಗತಿ, ಕೆಟ್ಟ ಕೆಲಸದಿಂದ ದುರ್ಗತಿ, ಇದೂ, ಒಂದು ನಿಯಮ. ಈ ನಿಯಮಗಳನ್ನು ಮೀರಲು ಮನುಷ್ಯರಿಗಾಗಲಿ ದೇವತೆಗಳಿಗಾಗಲಿ ಯಾರಿಗೂ ಸಾಧ್ಯವಿಲ್ಲ. ಈ ನಿಯಮಗಳೇ "ಋತ." ವರುಣ "ಋತಸ್ಯ ಗೋಪಾ": ಈತನೇ ಋತದ ಕಾರ್ಯವು ನಡೆಯುವಂತೆ ಮಾಡಿದನು. ಸುಳ್ಳು, ಮೋಸ, ಹಿಂಸೆ—ಯಾವುದೂ ವರುಣನಿಗೆ ಸಹಿಸುವುದಿಲ್ಲ; ಇಂತಹ ಕೆಲಸ ಮಾಡಿದವನು ಯಾವನಾದರೂ ವರುಣನ ಆಗ್ರಹಕ್ಕೆ ಪಾತ್ರನಾಗಿ ದುಃಖವನ್ನು ಅನುಭವಿಸುತ್ತಾನೆ. ದುಷ್ಕಾರ್ಯ ಮಾಡಿದವನಿಗೆ ವರುಣನ ಕ್ಷಮೆಯಿಲ್ಲ. ಭಕ್ತಿಯಿಂದ, ಸ್ತೋತ್ರದಿಂದ, ಯಜ್ಞದಿಂದ, ಹವಿಸ್ಸಿನಿಂದ ವರುಣನ ಅನುಗ್ರಹವನ್ನು ಮನುಷ್ಯ ಪಡೆಯಬೇಕು. "ತಪ್ಪಾಯಿತು, ಓ ವರುಣ, ನೀನೆ ಮನ್ನಿಸಿ ಕಾಪಾಡು" ಎಂದು ಮೊರೆಯಿಟ್ಟವ ನನ್ನು ಎಂದಿಗೂ ಕೈಬಿಡುವುದಿಲ್ಲ ವರುಣ. ಪಶ್ಚಾತ್ತಾಪ ದೈನ್ಯಗಳಿದ್ದರಾಯಿತು, ಎಂಥಾ ಅಪರಾಧವನ್ನಾದರೂ ವರುಣ ಕ್ಷಮಿಸಿ ರಕ್ಷಿಸುತ್ತಾನೆ. ವರುಣನ ಮಹಿಮೆಯನ್ನು ಸೂಕ್ತಗಳೇ ಹೊಗಳಲಿ—

ಕಾರ್ಯಗಳೆ ಪೊಗಳುವುವು ತಿಳಿವು ಬಲವಿವಸ
ಭೂಲೋಕನಾಕಗಳಿಗಾಧಾರ ಗೈದವನ,
ಅಂತರಿಕ್ಷವನೆತ್ತಿ ಮೇಲೆ ತಾ ಹಾಸಿದನ
ತಾರೆಗಳನ್ನಿಟ್ಟಲ್ಲಿ ಭುವಿಯ ದೇಶಗಳನ್ನು
ವಿಸ್ತಾರಗೈದವನ ಈ ವರುಣನ.

[ಋಗ್ವೇದ, ಮಂ. ೨, ಸೂ. ೮೬, ಋ. ೧]

ಮೋಡದಲಿ ಶೀತತೆಯ ಬೆರೆಸಿದವನಿವನು,
ಆಕಳಲಿ ಹಾಲನ್ನು ಕುದುರೆಯಲಿ ವೇಗವನು
ಹೃದಯದೊಳು ತಿಳಿವನ್ನು ಮೋಡದೊಳು ಮಿಂಚನ್ನು
ಆಗಸದಿ ಸೂರ್ಯನನು ಕಲ್ಲಿನಲಿ ಸೋಮವನು
ತಂದಿಟ್ಟನಿವನು ಈ ವರುಣದೇವ.

[ಮಂ. ೫, ಸೂ. ೮೫, ಋ. ೨]

ಸೂರ್ಯಚಲನವ ವರುಣ ನಿಯಮಿಸಿದನಾಗ,
ಪ್ರವಹಿಸುವ ನದಿಗಳನು ಮುಂದೋಡಿಸಿಹನು.
ಹಗಲು ರಾತ್ರಿಯ ಗಮನ ಸೃಜಿಸಿ ವಶದಲಿ ಇಟ್ಟು
ನಡೆಸುವನು ರಾವುತರು ಕುದುರೆಗಳವೋಲು.

[ಮಂ. ೭, ಸೂ. ೮೭, ಋ. ೧]

ಜಗದೊಡೆಯ ರಕ್ಷಕನು ತಾನೆಲ್ಲ ವರುಣ
ನೋಡುವನು ಕೈಯೆಡೆಯ ಇರುವವೋಲು
ಗುಟ್ಟಿನಲಿ ಮಾಡಬೇಕೆಂಬ ಯೋಜನೆಗಳನು
ಎಲ್ಲ ದೇವರ ಕಣ್ಗೆ ತೋರುವನು ವರುಣ ॥ ೧ ॥

ಚಲಿಸುವನ ನಿಲುವನನು ಗುಟ್ಟಾಗಿ ಸರಿಯುವನ
ಬಚ್ಚಿಟ್ಟುಕೊಳ್ಳುವನ ಮರೆಯಿಂದ ಓಡುವನ,
ಗುಟ್ಟಾಗಿ ಇಬ್ಬರೊಳು ನಡೆವ ಸಂಚೆಲ್ಲವನು
ನೋಡುವನು ವರುಣ ತಾ ಮೂರನೆಯನಾಗಿ ॥ ೨ ॥

ಅತ್ಯುನ್ನತ ಸ್ವರ್ಗವೇರಿದರು ವರುಣನಾ
ವಶದಿಂದ ಬೇರಾಗಲರಿಗಳವು ?
ನಾಕದಿಂ ಚರರವನ ಸಾರುವರು ಈಯೆಡೆಗೆ
ಸಾಸಿರದ ಕಣ್ಗಳಿಂ ಸುತ್ತ ನೋಡುತ್ತೆ ॥೩॥

ಭೂಮ್ಯಂತರಿಕ್ಷಗಳ ನಡುವೆ ಇರುವುದನೆಲ್ಲ
ಅವರಾಚೆ ಇರುವುದನು ವರುಣ ಕಾಣ್ಬ
ಮಾನವರ ನಿಮಿಷಗಳ[1] ಲೆಕ್ಕವಿಟ್ಟಿಹನಿವನು
ವಿಶ್ವವನು ಹೂಡುವನು, ಜೂದಿಗನು ಅಕ್ಷದೊಲು[2] ॥೪॥

—ಅಥರ್ವವೇದ ೪.೧೬

ಮಾಡಿದ ಕೆಟ್ಟಕೆಲಸಕ್ಕೆ ಯಾರಿಂದ ಕ್ಷಮೆ ಬೇಡುವುದು? ಕೃಪೆಮಾಡಿ ಕ್ಷಮಿಸಿ ಕಾಪಾಡುವ ಶಕ್ತಿ ವರುಣನಿಗಲ್ಲದೆ ಬೇರೆ ಯಾರಿಗುಂಟು? ಆದುದರಿಂದಲೇ ಋಷಿಗಳು ವರುಣನನ್ನು—

ಎಮಗೆ ಪ್ರಿಯರಾದವರಿಗೇನು ಕೆಟ್ಟುದ ಮಾಡಿ
ದುಃಖವನು ತಂದಿಹೆವೊ, ಸೋದರಗೆ ನೆರೆಯವಗೆ
ಎಮ್ಮ ನಾಡಿನ ಜನಕೆ, ಅಪರಿಚಿತಗಾದರೂ—
ಆ ಪಾಪವೆಲ್ಲವನು ಮನ್ನಿಸೈ ವರುಣ.[3]

ತಂದೆತಾತಂದಿರೆಮ್ಮ ಗೈದ ಪಾಪವನೆಲ್ಲ
ನಾವು ಗೈದಿಹ ಪಾಪವೆಲ್ಲ ಮನ್ನಿಸು ದಯದಿ

---

1 ನಿಮಿಷ—ಕಣ್ಣಿನ ಮುಚ್ಚುವುದು ಬಿಡುವುದು.

2 ಅಕ್ಷ—ದ್ಯೂತದಲ್ಲುಪಯೋಗಿಸುವ ಒಂದು ಕಾಯಿ; ದಾಳದಂತಹದು.

ಅಥರ್ವವೇದದಿಂದ ಈ ಸೂಕ್ತವನ್ನು ತೆಗೆದು ಇಲ್ಲಿ ಕೊಡಲು ಕಾರಣ, ವರುಣನ ಮಹಿಮೆ, ಶಕ್ತಿ, ದಯೆ, ಪ್ರಜ್ಞೆ ಇವುಗಳನ್ನು ಬಹಳ ಚೆನ್ನಾಗಿ ಈ ಸೂಕ್ತ ವರ್ಣಿಸುತ್ತದೆಯೆಂಬುದೇ; ವರುಣನ ಸಂಪೂರ್ಣಸ್ವರೂಪ ಇದರಿಂದ ಚೆನ್ನಾಗಿ ಗೊತ್ತಾಗುತ್ತದೆ.

3 ಮಂ. ೫, ಸೂ. ೮೫, ಋ. ೭.

ನನ್ನ ಪಾಪದಿನೆನ್ನ ಬಿಡಿಸುವುದು ಓ ವರುಣ
ಅನ್ಯರಾ ಪಾಪಫಲ ನನಗೆ ಬರದಿರಲಿ.[1]
ವಂಚಕರ ಜೂದಿಗರವೊಲು ಗೈದ ವಂಚನೆಯು
ತಿಳಿದು ತಿಳಿಯದೆ ಗೈದ ತಪ್ಪುಗಳನೆಲ್ಲ
ದಂಡಿಸದಿರೈ ದೇವ ಎಮ್ಮ ಪಾಪಂಗಳ್ಗೆ
ಸುಜ್ಞಾನಿ ಸ್ತುತಿಸುವೀ ಎನ್ನ ರಕ್ಷಕನಾಗು.[2]

**ವರುಣನ** ದಯೆಯಿಂದ ಅಮೃತತ್ವ ಬರುವುದು: ದೇಹ ಹೋದ ಬಳಿಕವೂ ಆತ್ಮ ಸಂತುಷ್ಟವಾಗಿರಬೇಕಾದರೆ ವರುಣನ ಅನುಗ್ರಹವಿರಲೇಬೇಕು. ಪಾಪವಿಮೋಚನೆ ಮಾಡಿ ವರುಣನು ನಿತ್ಯಸುಖವನ್ನು ಕೊಡುತ್ತಾನೆ. ಇದಲ್ಲದೆ ಇನ್ನಾವುದು ಪರಮ ಪುರುಷಾರ್ಥ! ಸರ್ವಾಂತರ್ಯಾಮಿ ವರುಣ: ನೀರಿನ ಕಣವೊಂದೊಂದರಲ್ಲಿಯೂ ವರುಣನಿದ್ದಾನೆ. ಮುಂದೆ ಪುರಾಣಗಳ ಕಾಲಕ್ಕೆ ಈ ವರುಣನೇ ಜಲಾಭಿಮಾನಿದೇವತೆಯಾಗಿದ್ದಾನೆ. ಈ ವರುಣನಿಗೆ ಸರಿಸಮನಾಗಿ ಪ್ರಾಚೀನ ಗ್ರೀಕರ "ಔರನಸ್" ಅಥವಾ "ಯೂರೆನಸ್" ಎಂಬ ಜಲದೇವತೆಯನ್ನು ಕಾಣಬಹುದು. ಅಲ್ಲದೆ, ವರುಣನಿಗೇ ವಿಶಿಷ್ಟವಾದ ಒಂದು ಪದದ ಪ್ರಯೋಗವಿದೆ; ಆ ಪದ "ಅಸುರ." ಅಸುರ ಎಂಬ ಪದಕ್ಕೆ 'ದೇವ' ಎಂಬ ಅರ್ಥವಿದ್ದು, ಬಹುಕಾಲದಮೇಲೆ ಕಾರಣಾಂತರಗಳಿಂದ ಅಸುರ ಶಬ್ದಕ್ಕೆ ರಾಕ್ಷಸ ಎಂಬ ಅರ್ಥ ಬಂದು. ಅಲ್ಲಿಂದ ಮುಂದೆ ಅದಕ್ಕೆ ಪ್ರತಿಯಾಗಿ 'ಸುರ' ಎಂಬ ಶಬ್ದ ಸೃಷ್ಟಿಯಾಯಿತೆಂದು ಹೇಳುತ್ತಾರೆ. ಅವೆಸ್ತದಲ್ಲಿನ "ಅಹುರ ಮಜ್ದ"ನು

[1] ಮಂ. ೭, ಸೂ. ೮೬, ಋ. ೫ ಮತ್ತು ಮಂ. ೨, ಸೂ. ೨೮, ಋ. ೯.

[2] ಮಂ. ೫, ಸೂ. ೮೫, ಋ. ೮, ಮತ್ತು ಮಂ. ೭, ಸೂ. ೮೮, ಋ. ೬.

ವರುಣ ದೇವನನ್ನು ಬಹುಮಟ್ಟಿಗೆ ಹೋಲುತ್ತಾನೆ. ವೇದದಲ್ಲಿ ವರುಣನು 'ಋತ'ವನ್ನು ನಡೆಸುವವನು; ಅವೆಸ್ತದಲ್ಲಿ 'ಅಹುರ'ನು 'ಆಶಾ' ಎಂಬ ನೀತಿ ನಿಯಮವನ್ನು ನಡೆಸುವವನು. ವರುಣನೂ ಮಿತ್ರನೂ ಒಟ್ಟಿಗೆ ಸ್ತುತರಾಗುತ್ತಾರೆ; ಹಾಗೆಯೇ ಅವೆಸ್ತದಲ್ಲಿ ಮಿಥ್ರನೂ ಅಹುರನೂ ಸ್ತುತರಾಗುತ್ತಾರೆ. ಇನ್ನೂ ಅನೇಕ ಸಾದೃಶ್ಯಗಳುಂಟು. ವರುಣನನ್ನು ಸ್ತುತಿಸುವ ಸೂಕ್ತಗಳ ಭಾವ ಅತಿ ಗಂಭೀರವಾಗಿಯೂ ಉನ್ನತವಾಗಿಯೂ ಇರುವುದೆಂಬುದು ಈ ಮೇಲೆ ತೋರಿಸಿದ ಉದಾಹರಣೆಗಳಿಂದ ಭಾಸವಾಗುತ್ತದೆ. ಈ ಸೂಕ್ತಗಳ ಭಾವವು ಅನೇಕ ಶತಮಾನಗಳ ತರುವಾಯ ರಚಿತವಾದ ಯೆಹೂದ್ಯರ "ಟಾಲ್ ಮುಡ್", ಕ್ರೈಸ್ತರ "ಬೈಬಲ್" ಗ್ರಂಥಗಳಲ್ಲಿ ಕಾಣುವ ಪ್ರಾರ್ಥನೆಗಳ ಭಾವವನ್ನು ಉದಾತ್ತತೆಯಲ್ಲೂ ನಮ್ರತೆಯಲ್ಲೂ ಹೋಲುತ್ತದೆ ಎಂದು ಯೂರೋಪ್ ಖಂಡದ ಅನೇಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ವರುಣನೊಡನೆ ಸ್ತುತನಾದ ದೇವತೆಯೆಂದರೆ "ಮಿತ್ರ". ಸೂರ್ಯನಿಗೆ ಸೇರಿದಂತಹ ಕೆಲವು ಶಕ್ತಿಗಳೂ ಇವನಿಗೆ ಉಂಟು. ಜನರನ್ನೊಟ್ಟುಗೂಡಿಸುವುದು ಮಿತ್ರನ ವಿಶೇಷ ಧರ್ಮ. ಕೆಲವು ಸಲ ಸವಿತೃವಿನೊಡನೆಯೂ ಅನೇಕ ಬಾರಿ ವರುಣನೊಡನೆಯೂ ಸ್ತುತನಾಗಿರುತ್ತಾನೆ. ಮಿತ್ರನ ವಿಷಯ ಅಷ್ಟು ತಿಳಿದಿಲ್ಲ. ಮನುಷ್ಯರೆಲ್ಲರಿಗೂ ಒಂದಿಲ್ಲೊಂದು ತೆರನಾಗಿ ಸಹಾಯ ಅನುಗ್ರಹಗಳನ್ನು ಮಾಡುವುದರಿಂದ 'ಮಿತ್ರ', ಜನರ ಜೀವನವನ್ನು ಎವೆಮುಚ್ಚದೆ ನೋಡುತ್ತಿರುತ್ತಾನೆಂಬುದೂ ಮಿತ್ರನ ಧರ್ಮ. ಈ ಮಧ್ಯೆ ಜ್ಞಾಪಕದಲ್ಲಿಡಬೇಕಾದ ಅಂಶವಿದು: ಅವೆಸ್ತದಲ್ಲಿಯೂ 'ಮಿಥ್ರ' ಎಂಬ ಶ್ರದ್ಧಾಭಿಮಾನಿ ದೇವನನ್ನು ಕಾಣುತ್ತೇವೆ.

ಸೂರ್ಯಮಂಡಲದ ಅಧಿಷ್ಠಾತೃದೇವ "ಸೂರ್ಯ." ಉಷಸ್ಸಿನ ಉದರದಲ್ಲಿ ಜನಿಸಿದ. ದ್ಯೌಃಪಿತನ ಪುತ್ರ. ಚಿನ್ನದ ತಲೆಗೂದಲೊಡನೆ ಪ್ರಕಾಶಿಸುತ್ತಾ, ಜನರನ್ನೆಚ್ಚರಿಸುತ್ತಾ, ಸ್ತುತಿಮಾಡುವವರು ಸಂತೋಷದಿಂದ ನೈವೇದ್ಯಬ್ಬಿರಲು, ಇರುಳ ಕರಿಯುಡುಗೆಯು ಕಳೆದಿರಲು, ನಕ್ಷತ್ರಗಳು ಕಳೆಗುಂದಿ ಕಳ್ಳರಂತೋಡುತ್ತಿರಲು—

> ನಭದ ಸ್ವರ್ಣಛತ್ರ ದೂರ ದೃಷ್ಟಿಯು ಜೀವ
> ಹೊರಟನಿದೊ ದೂರದೂರಿಗೆ ರಥವನೇರಿ.
> ಸೂರ್ಯನಾ ಶಕ್ತಿಯಿಂ ಬಲಗೊಂಡು ಮಾನವರು
> ಗುರಿಯೆಡೆಗೆ ಸಾಗಲಿ
> ಯತ್ನಗಳನೆಸಗಲಿ.[1]

ಹೀಗೆ ಸೂರ್ಯದೇವ ದಿನದಿನವೂ ಹುಟ್ಟುತ್ತ, ಎಲ್ಲ ಪ್ರಾಣಿಗಳ ಸತ್ಕಾರ್ಯ ದುಷ್ಕರ್ಮಗಳನ್ನೆಲ್ಲ ನೋಡುತ್ತ, ಸಜ್ಜನರ ಮಾರ್ಗವನ್ನು ಸಂರಕ್ಷಿಸುತ್ತ, ಪ್ರತಿಯೊಬ್ಬನನ್ನೂ ಅವನವನ ಕೆಲಸದಲ್ಲಿ ನಿಯೋಜಿಸುತ್ತ, ಸಂಜೆಯಲ್ಲಿ ರಥದಿಂದ ತನ್ನ ಕುದುರೆಗಳನ್ನು ಬಿಚ್ಚಿ, ಎಲ್ಲರೂ ಕೆಲಸವನ್ನು ನಿಲ್ಲಿಸುವಂತೆ ಆಜ್ಞಾಪಿಸಿ, ಕತ್ತಲು ಬರುವಂತೆ ಮಾಡುತ್ತಾನೆ. ಬೆಳಕಿಗೆ ಅಧಿದೇವತೆಯಾದ ಸೂರ್ಯ ಎಲ್ಲರನ್ನೂ ಸಮದೃಷ್ಟಿಯಿಂದ ಕಾಣುತ್ತ ಎಲ್ಲರಿಗೂ ಆರೋಗ್ಯ ಸಂಪತ್ತು ಹೆಚ್ಚುವಂತೆ ಮಾಡುತ್ತಾನೆ.

"ಪೂಷನ್" ಎಂಬ ದೇವತೆ ಪೋಷಕ; ಧನಧಾನ್ಯಸಮೃದ್ಧಿಯನ್ನೂ ಪಶುಸಮೃದ್ಧಿಯನ್ನೂ ಕೊಟ್ಟು, ಮನುಷ್ಯನು ಹೊಂದುವಂತೆ ಮಾಡುತ್ತಾನೆ; ಕೃಪಣರ, ಲೋಭಿಗಳ ಹೃದಯ

---

[1] ಮಂ. ೭, ಸೂ. ೬೩, ಋ. ೪.

ದಲ್ಲಿ ತನ್ನ ಆಯುಧವನ್ನು ನೆಟ್ಟು. ಅವರ ಧನವೆಲ್ಲವನ್ನೂ ಯಾಚಿಸುವ ಭಕ್ತರಿಗೆ ಕೊಡಿಸುವವನಿವನು. ಆಕಳು ಕುರಿ ಕುದುರೆಗಳ ಸುಖಕ್ಕೆ, ಏಳ್ಗೆಗೆ ಪೂಷನ ಅನುಗ್ರಹ ಕಾರಣ. ಪ್ರಯಾಣ ಹೊರಟಾಗ ದಾರಿಯಲ್ಲಿ ಆಕಸ್ಮಿಕಗಳೂ ವಿಪತ್ತುಗಳೂ ಕಳ್ಳಕಾಕರ ಹಾವಳಿಯೂ ಇಲ್ಲದಂತೆ ಕಾಯುವವನು ಪೂಷ.

ಮೂರು ಹೆಜ್ಜೆಯಲ್ಲಿ ಭೂಮಿಯನ್ನೆಲ್ಲ ಅಳೆದ "ವಿಷ್ಣು" (ವ್ಯಾಪಕ)[1]ವಿನ ಮಹಿಮೆಯನ್ನು ಋಗ್ವೇದದಲ್ಲಿ ಮೊದಲು ಕಾಣುತ್ತೇವೆ: ವಿಸ್ತಾರವಾದ ಭೂಮಿಯನ್ನು ಮೂರು ಪಾದಿನಲ್ಲಳೆದು, ಆಹಾರವನ್ನು ಬೇಡುಕೊಳ್ಳಲೆಂದು ಮಾನವನಿಗೆ ಕೊಟ್ಟನು. ಈತನ ಪದಚಿಹ್ನಗಳು ನಿರಂತರ ಸುಖದ ಉದ್ಗಮಸ್ಥಾನಗಳು. ಒಂದನೆಯ ಮತ್ತು ಎರಡನೆಯ ಪದ ಚಿಹ್ನಗಳನ್ನು. ಬಹು ಕಷ್ಟಪಟ್ಟರೆ ಮಾತ್ರ ಮಾನವರು ಕಾಣಬಹುದು. ಮೂರನೆಯದರೆಡೆಗೆ ಹಕ್ಕಿಗಳೂ ಸುಳಿಯಲಾರವು. ಮೇಲೆ — ಆಕಾಶದಿಂದಲೂ ಬಹುಮೇಲೆ — 'ಪರಮೇ ವ್ಯೋಮನ್'—ಇರುವ ಈ ಮೂರನೆಯ ಹೆಜ್ಜೆಯನ್ನು ಕುರಿತು ಪ್ರಾಜ್ಞರು ಧ್ಯಾನಮಾಡುತ್ತಾರೆ. ಇಲ್ಲಿ ಉಕ್ಕಿಬರುವ ಅಮೃತವನ್ನು ದೇವತೆಗಳಿಗೆ ಪ್ರೀತಿಪಾತ್ರರಾದ ಜನರು ಸವಿಯುತ್ತಾ ಸುಖದಿಂದ ವಾಸಿಸುತ್ತಿರುತ್ತಾರೆ. ಇಲ್ಲಿ ನಾವು ಕಾಣುವ ವಿಷ್ಣು ಇತರ ಎಲ್ಲ ದೇವತೆಗಳನ್ನೂ ಹಿಂದಕ್ಕೆ ತಳ್ಳಿ ಇತಿಹಾಸಗಳ

[1] ವಾಮನಾವತಾರ — ತ್ರಿವಿಕ್ರಮಾವತಾರಗಳ ಕಥೆಗೆ ಇದೇ ಮೂಲ. ಈ ಮೂರು ಪಾದಿನಲ್ಲಿ ಭೂಮಿಯನ್ನೆಲ್ಲ ಅಳೆದುದನ್ನು ವಾಮನ ಹೆಜ್ಜೆಗಳೊಳಗೆ ಒಂದರಲ್ಲೇ ಅಳೆದುದರೊಡನೆ ಹೋಲಿಸಿ ನೋಡಿ.

ಕಾಲಕ್ಕೆ ತ್ರಿಮೂರ್ತಿಗಳಲ್ಲಿ ಮುಖ್ಯನಾಗುತ್ತಾನೆ. ಆದರೆ ವೇದದಲ್ಲಿ. ಅದರಲ್ಲೂ ಋಗ್ವೇದದಲ್ಲಿ. ವಿಷ್ಣುವಿನ ವಿಷಯ ಇರುವುದು ಕೊಂಚವೇ.

ಸೂರ್ಯಮಂಡಲದ ಅಧಿದೇವತೆ ಸೂರ್ಯನಾದರೆ, ಸೂರ್ಯನ ಶಕ್ತಿಯಾದ ಉತ್ತೇಜಕತ್ವ. ಪ್ರಚೋದಕತ್ವ, ಜೀವದಾತೃತ್ವಗಳ ಅಧಿದೇವತೆ "ಸವಿತೃ." ಚಿನ್ನದ ತೋಳು ಚಿನ್ನದ ಕೈಗಳಿಂದ ಪ್ರಕಾಶಮಾನವಾದ ಸವಿತೃದೇವ ಸೂರ್ಯನನ್ನು ಕರೆತರುತ್ತಾ ಎಲ್ಲ ಜೀವಿಗಳನ್ನೂ ಎಚ್ಚರಿಸಿ, ತಮ್ಮ ತಮ್ಮ ಕೆಲಸಗಳಲ್ಲಿ ತೊಡಗುವಂತೆ ಪ್ರಚೋದನೆ ಮಾಡುವನು. ಚಿನ್ನದ ಬಣ್ಣದ ಕುದುರೆಗಳನ್ನು ಕಟ್ಟಿದ ಚಿನ್ನದ ರಥದಲ್ಲಿ ಸವಿತೃ ವಿರಾಜಮಾನನಾಗಿ ದ್ವಿಪಾದಿ ಚತುಷ್ಪಾದಿಗಳನ್ನು ಸಂತೋಷಗೊಳಿಸಿ. ಪುನರುಜ್ಜೀವನಗೊಳಿಸಿ ಹುರುಪುಂಟುಮಾಡುವನು: ಧೈರ್ಯವನ್ನು ಉತ್ಪಾದನೆಮಾಡುವನು; ಧನಧಾನ್ಯಗಳು ಹೆಚ್ಚುವಂತೆ ಮಾಡುವನು. ದೇವತೆಗಳನ್ನು ಅಮೃತತ್ವದ ಕಡೆ ತಿರುಗುವಂತೆ ಮಾಡಿದವನು ಸವಿತೃ: ಮಾನವನ ಪಾಪಗಳನ್ನು ಕಳೆದು ಜೀವನ ಸುಖಮಯವಾಗಿರುವಂತೆ ಮಾಡಿದವನು ಸವಿತೃ. ದಿನದಿನವೂ ವರಗಳನ್ನು ಕೊಡುತ್ತ ಆಶೀರ್ವದಿಸುವವನೂ ಬೆಳಗಾದಾಗ ಜೀವ ತಂದುಕೊಡುವವನೂ ಸವಿತೃ. ಸಂಜೆಯಲ್ಲಿ ಕಂದುಬಣ್ಣದ ಹೊದಿಕೆ ಹೊದೆದು. ಧೂಳಿಲ್ಲದ ದಾರಿಯಲ್ಲಿಳಿಯುವನು; ರಾತ್ರಿಯಲ್ಲಿ ಪದ್ಧತಿಯಂತೆ ನಕ್ಷತ್ರಗಳನ್ನು ನಡೆಯಿಸುವನು. ಬುದ್ಧಿಶಕ್ತಿ ಜ್ಞಾನಗಳಿಗೆ ಸವಿತೃವಿನ ಅನುಗ್ರಹಬೇಕು. ಈ ದೇವತೆಯ ಪ್ರಾರ್ಥನೆಯೇ ಪರಮ ಪವಿತ್ರವಾದ ಗಾಯತ್ರಿ:

ಆ ಸವಿತೃದೇವನಾ ಶ್ರೇಷ್ಠತಮವಾದ
ತೇಜಸ್ಸ ಕುರಿತು ನಾವ್ ಧ್ಯಾನಿಸುವೆವು.
ಪ್ರ-ಚೋದಿಸಲಿ ಆ ದೇವನೆಮ್ಮ ಬುದ್ಧಿಗಳ.

ಯುವಕರೂ ಅತಿಸುಂದರರೂ ಮೇಧಾವಿಗಳೂ ಆದ "ಅಶ್ವಿನೀ" ದೇವತೆಗಳು ಅವಳಿದೇವತೆಗಳು. ಕತ್ತಲೆ ಹೋಗಿ ಬೆಳಕು ಬಂದೊಡನೆಯೇ ಅಶ್ವಿನೀಕುಮಾರರು ಪ್ರಕಾಶಿಸುವುದನ್ನು ಕಂಡು ಋಷಿಗಳು ಸ್ತುತಿಮಾಡಲುಪಕ್ರಮಿಸುತ್ತಾರೆ. ಒಡನೆಯೇ ಅಶ್ವಿನೀದೇವತೆಗಳು ಬಹು ಪ್ರಕಾಶಮಾನವಾದ ರಥವನ್ನು ಹತ್ತಿ, ಸೂರ್ಯನೊಡನೆ ಆಕಾಶವಲ್ಲೆಲ್ಲಾ ಮನೋವೇಗದಿಂದ ಸಂಚರಿಸುತ್ತಾರೆ. ಇರುಳ ಕೊನೆಯಲ್ಲಿ ತಮ್ಮಿಬ್ಬರನ್ನೂ ವರಿಸಿದ ಸೂರ್ಯನ ಮಗಳಾದ ಸೂರ್ಯೆಯೊಡನೆ ಪ್ರಯಾಣ ಮುಂದುವರಿಸುತ್ತಾರೆ. ದಿನದಿನವೂ ಈ ಮೆರವಣಿಗೆ ನಡೆದೇ ಇರುತ್ತದೆ. ಅಶ್ವಿನಿಗಳು ದೇವವೈದ್ಯರು. ಕುರುಡನಿಗೆ ಕಣ್ಣನ್ನೂ ಕುಂಟನಿಗೆ ಕಾಲನ್ನೂ ಕೊಟ್ಟವರು. ಇವರು ವಾಸಿಮಾಡಲಾಗದ ರೋಗವಿಲ್ಲ. ದುಃಖದ ಜಾಲವನ್ನು ತುಂಡರಿಸಿ, ಪತಿತನನ್ನು ಉದ್ಧರಿಸಿ ಹಿಂದುಳಿದವನನ್ನು ಮುಂದಕ್ಕೆ ತರುತ್ತಾರೆ. ಮಡುವಿನಲ್ಲಿ ಬಿದ್ದ ವಂದನನನ್ನು ಮೇಲೆತ್ತಿದವರು; ಬಹುಕಾಲ ಮಕ್ಕಳಿಲ್ಲದವರಿಗೆ, ಪುತ್ರಸಂತತಿಯನ್ನನುಗ್ರಹಿಸಿದವರು; ಕಾಲಿಲ್ಲದ ವಿಶ್ಪಲೆ ತಿರುಗಿ ನಡೆದಾಡುವಂತೆ ಕರುಣಿಸಿದವರು; ಶತ್ರುವಿನ ಮಂತ್ರಕ್ಕೆ ಸಿಕ್ಕಿ ಬೇಯುತ್ತಿದ್ದ ಅತ್ರಿಯನ್ನು ಕಾಪಾಡಿದವರು; ಚ್ಯವನನ ಮುಪ್ಪನ್ನು ಕಳೆದವರು; ಶತ್ರುಗಳು ನೀರೊಳಗೆ ಹುದುಗಿಸಿಟ್ಟು ಸಾಯಿಸಿದ ರೇಭನಿಗೆ ಪುನರ್ಜೀವ ಕೊಟ್ಟವರು: ತೋಳದ ದವಡೆಯಿಂದ ಜಿಂಕೆಯನ್ನು ಬಿಡಿಸಿದವರು; ಜೇನಿಗೆ ಮಧುವನ್ನು ಕೊಟ್ಟವರು. ಹೀಗೆ ಅಶ್ವಿನೀದೇವತೆಗಳ ಅದ್ಭುತ ಕಾರ್ಯಗಳು ಅನೇಕ ತೆರನಾಗಿವೆ.

ಗಾಳಿಗಭಿಮಾನಿ 'ವಾತ'-ವಾಯುಃ ಬಿರುಗಾಳಿಯಾದಾಗ ಮಾತ್ರ ಘೋರರೂಪ; ಉಳಿದ ವೇಳೆ—

ಎಲ್ಲಿ ಹುಟ್ಟಿದನಿವನು, ಎಲ್ಲಿಂದ ಬಂದವನು ?
ದೇವತೆಗಳುಸಿರಿವನು, ವಿಶ್ವಸೂನು.
ಈ ದೇವ ಸ್ವೇಚ್ಛೆಯಂತೆಲ್ಲ ತೆಯು ಚರಿಸುವನು,
ಚಲಿಸುವುದು ಕೇಳುತಿದೆ—
ರೂಪ, ಕಂಡವರಾರು ?[1]

ಎಲ್ಲವನ್ನೂ ನಾಶಗೊಳಿಸುವ ಬಿರುಗಾಳಿ "ರುದ್ರ." ಸುಂದರರಲ್ಲಿ ಅತಿ ಸುಂದರ: ಬಲಿಷ್ಠರಲ್ಲಿ ಬಲಿಷ್ಠ; ಕೆಟ್ಟ ಕೆಲಸ ಮಾಡಿದವನಿಗೆ ಆಕ್ಷಣವೇ ರುದ್ರನ ಈಟಿಯು ಅಥವಾ ಬಾಣದ ಸವಿ. ಜನರ ಕಷ್ಟವನ್ನು ಪರಿಹರಿಸುವುದಕ್ಕೋಸ್ಕರ ತಣ್ಣನೆಯ ಔಷಧಗಳುಳ್ಳವನು: ಕೆಟ್ಟ ರೋಗಗಳನ್ನೆಲ್ಲ ಮಿಂಚಿನಂತೆ ವಾಸಿ ಮಾಡುವವನು; ಭೂತಪಿಶಾಚಗಳ ಕಾಟವಿಲ್ಲದಂತೆ ಕಾಪಾಡುವವನು; ಜನಕ್ಕೂ ದನಕ್ಕೂ ಪುಷ್ಟಿಯನ್ನಿತ್ತು ಸಂತೋಷವನ್ನುಂಟುಮಾಡುವವನು. ಈ ರುದ್ರ ಯಜುರ್ವೇದದಲ್ಲಿ ಇನ್ನೂ ಪ್ರಮುಖನಾಗಿ, ಪುರಾಣ ಇತಿಹಾಸಗಳ ವೇಳೆಗೆ ವಿಷ್ಣುವಿನಂತೆ ತ್ರಿಮೂರ್ತಿಗಳಲ್ಲೊಬ್ಬನಾಗುತ್ತಾನೆ.

ರುದ್ರನೊಡನಾಡಿಗಳು ಮತ್ತು ಮಕ್ಕಳು ಮರುತ್ತುಗಳು: ಮರುತ್ತುಗಳು ಮೋಡ, ಗುಡುಗು, ಮಿಂಚುಗಳಿಂದ ಒಡಗೂಡಿದ ಬಿರುಗಾಳಿಯ ದೇವತೆಗಳು. ವಿವಿಧವಾದ ವೇಷಗಳನ್ನು ತಳೆದು, ಗರ್ಜಿಸುತ್ತ, ಚಿನ್ನದ ಶಿರಸ್ತ್ರಾಣ ಧರಿಸಿ, ಚಿನ್ನದ ಕಂಕಣವಲಯಗಳನ್ನು ತೊಟ್ಟು, ಗುರಾಣಿ ಹಿಡಿದು, ಬೆಂಕಿ ಸುರಿಸುವ ಆಯುಧಗಳನ್ನು ಝಳಪಿಸುತ್ತ, ಇಂದ್ರನ

1 ಮಂ. ೧೦, ಸೂ. ೧೬೮, ಋ. ೪ ಮತ್ತು ೪.

ಸಹಾಯಕ್ಕೆ ಓಡುವರು. ಇವರ ಗರ್ಜನೆಗೆ ಪರ್ವತಗಳೂ ತಲ್ಲಣಿಸುತ್ತವೆ; ಹಗಲಿನಲ್ಲೂ ಇರುಳನ್ನು ತರಬಲ್ಲವರಿವರು. ಕಾಡುಗಳನ್ನೆಲ್ಲ ನೆಲಸಮಮಾಡಬಲ್ಲರು; ಇವರ ರಭಸಕ್ಕೆ ಸ್ಥಿರೆಯಾದ ಭೂಮಿಯೂ ಕಂಪಿಸುವುದು. ಇವರು ಮಳೆಗಭಿಮಾನಿಯಾದ "**ಪರ್ಜನ**"ನನ್ನು ಕರೆತರುತ್ತಾರೆ. **ಪರ್ಜನ್ಯ** ಬಂದೊಡನೆ, ಘೋರಗರೆವ ಮೋಡಗಳನ್ನೊಟ್ಟುಗೂಡಿಸಿ. ಮಳೆಯ ಧಾರೆ ಅವಿಚ್ಛಿನ್ನವಾಗಿ ಬೀಳುವಂತೆ ಮಾಡುತ್ತಾನೆ.

ನೀರ್ ಬತ್ತಿ ಬೆಂದಿಪ್ಪ ಹೊಲಗದ್ದೆ ತಣಿಸುವ
ಬಿದ್ದಿರುವ ಮಳೆಯಿಂದ; ಇನ್ನು ಸಾಕು.
ನಮ್ಮ ಸಂತೋಷಕ್ಕೆ ಮೂಲಿಕೆಯ ಬೆಳೆಸಿಹ,
ಕೇಳಿದುದ ಕೊಟ್ಟಿಹನು ಪರ್ಜನ್ಯದೇವ.

[ಮಂ. ೫, ಸೂ. ೮೩, ಋ. ೧೦]

"**ಸೋಮ**"ವೆಂಬುದು ಅದೇ ಹೆಸರಿನ ಲತೆಯೊಂದರ ರಸ; ಇದು ಯಜ್ಞದಲ್ಲಿ ಅತಿಮುಖ್ಯವಾದ ವಸ್ತು; ವರ್ಣನೆಗೆ ಸಿಲುಕದಷ್ಟು ಮಹಿಮೆಯುಳ್ಳದ್ದು: ಇದು ದೇವತೆಗಳ ಪಾನೀಯ. ಈ ಲತೆಯನ್ನು ಸ್ವರ್ಗಲೋಕದ ಹಕ್ಕಿ ಗರುಡನೆಲ್ಲಿಂದಲೋ ತಂದನೆಂದೂ, ವರುಣನ ಬೆಟ್ಟದ ಮೇಲೆ ನೆಟ್ಟನೆಂದೂ ಕಥೆಯಿದೆ. ಇದರ ರಸವನ್ನು ಹಿಂಡಿ ಹಾಲಿನಲ್ಲಿಯೋ ಅಥವಾ ಗೋಧಿಯ ಗಂಜಿಯಲ್ಲಿಯೋ ಬೆರಸಿ, ಹುಳಿಯುತ್ಪನ್ನವಾಗಲು ಕೊಂಚಕಾಲಬಿಟ್ಟು. ಅನಂತರ ಮಾದಕಶಕ್ತಿಯುಂಟಾದೊಡನೆ ಬಹು ಸಂತೋಷದಿಂದ ಆಗಿನ ಜನರು ಕುಡಿಯುತ್ತಿದ್ದರು; ರೋಗಿಗಳು ಸೂರ್ಯೋದಯ ಸಮಯದಲ್ಲಿ ಈ ಸೋಮರಸವನ್ನು ಪಾನಮಾಡಿದರೆ, ರೋಗನಿವಾರಣೆಯಾಗುವುದು: ಕೈಕಾಲುಗಳಿಗೆ ಬಲ ಬರುವುದು; ಆಯುಸ್ಸು ಬೆಳೆಯುವುದು.

ಇದನ್ನು ಕುಡಿದವನಿಗೆ ‘ ಇದಿಲ್ಲ ಆದಿಲ್ಲ ’ ಎಂಬ ಚಿಂತೆಯಿಲ್ಲ; ಕುಡಿದು, ಬಡವ ತಾನು ಧನಿಕನೆಂದು ಹರ್ಷಿಸುವನು; ಕವಿಗೆ ಅಮಾನುಷಶಕ್ತಿಯನ್ನೂ ಬುದ್ಧಿಯನ್ನೂ, ಕೊಟ್ಟು, ಆವನ ಸ್ತೋತ್ರಗಳು ಹೆಚ್ಚು ಹೆಚ್ಚು ಸುಂದರವೂ ದೇವತೆಗಳಿಗೆ ಪ್ರಿಯವೂ ಆಗುವಂತೆ ಇದು ಮಾಡುವುದು. ಈ ರಸದ ಬಣ್ಣ ತೊಳಗುವ ಹೊನ್ನಿನದು; ಮಿಕ್ಕೆಲ್ಲ ದೇವರ ಶಕ್ತಿ ಸೋಮ ದೇವನಲ್ಲುಂಟು; ಇಂದ್ರನ ಪರಾಕ್ರಮ ಸಾಹಸಗಳಿಗೆ ಸೋಮ ದೇವ ತಾನೇ ಕಾರಣ; ಅಗ್ನಿಯಂತೆ, ಇಂದ್ರನಂತೆ, ಅಶ್ವಿನಿ ದೇವತೆಗಳಂತೆ ತೇಜಸ್ಸು ಪರಾಕ್ರಮ ಕೃಪೆಗಳಲ್ಲಿ ಸೋಮದೇವ ನಿಗೂ ಒಂದು ಸ್ಥಾನ. ವರುಣನ ಆಜ್ಞೆಗಳೆಲ್ಲ ಸೋಮದೇವನ ಆಜ್ಞೆಗಳು; ವರುಣನಂತೆಯೇ ಪಾಪಮಾಡಿದವರನ್ನು ನಿರ್ದಯ ನಾಗಿ ದಂಡಿಸುವನು, ಸತ್ಕಾರ್ಯಮಾಡಿದವರಿಗೆ ಅವನಂತೆಯೇ ಅನುಗ್ರಹ ಮಾಡುವನು. ಈತನಿಗೇ “ ರಾಜಾ ” ಎಂಬ ಹೆಸರು; ಇವನು “ ವನಸ್ಪತಿ ”—ಗಿಡಮರಗಳೆಲ್ಲದರ ಒಡೆಯ. ದೇವತೆಗಳಿಗೆ ಸಾವಿಲ್ಲದಿರುವುದು ಸೋಮದಿಂದ; ಸೋಮವೇ “ ಅಮೃತ.” ಒಂಬತ್ತನೆಯ ಮಂಡಲದ ಎಲ್ಲ ಸೂಕ್ತಗಳೂ “ ಸೋಮಪವಮಾನ ”ನ ಸ್ತುತಿಯೇ ಆಗಿವೆ. ಸೋಮವನ್ನು ಕುಡಿದವರಿಗೆ ಕಷ್ಟವಿಲ್ಲ, ದುಃಖವಿಲ್ಲ, ಬಡತನವಿಲ್ಲ, ನೋವಿಲ್ಲ, ಸಾವಿಲ್ಲ.

ಸೋಮವನು ಕುಡಿದಿಹೆವು
ನಾವಮೃತರಾಗಿಹೆವು
ಬೆಳಕ ನಾವ್ ಕಂಡಿಹೆವು
ಅರಿಗಳಿಗೆ ಸಿಕ್ಕುವೆವೆ ನಾವು ಇನ್ನು !
ಹೇ ಅಮೃತ, ಮಾನವರ
ಧೂರ್ತತೆಯದೆಮ್ಮನ್ನು

ಮುಟ್ಟಲಾರದು ಇನ್ನು—
ಭೀತಿಗೊಳಿಸುವುದೇನು ಇನ್ನು ನಮ್ಮನ್ನು ?—
[ಮಂ. ೮, ಸೂ. ೪೮, ಋ. ೩]

ವೇದದಲ್ಲಿ "ಸೋಮ"ದಂತೆಯೇ, ಅವೆಸ್ತದಲ್ಲಿಯೂ "ಹಓಮ" ಎಂಬ ಲತೆಯ ರಸ ದೇವತ್ವಕ್ಕೆ ಏರಿರುವಂತೆ ಕಾಣುತ್ತದೆ. ಇಲ್ಲಿ ಸೋಮದೇವ ಜ್ಞಾನ, ಸದುಪದೇಶ, ಶಕ್ತಿಗಳನ್ನು ಕೊಡುವಂತೆಯೇ, ಅಲ್ಲೂ ಪುರಾತನವಾದ ಪಾರಸಿಕರ ಮತವನ್ನು ಸ್ಥಾಪಿಸಿದ ಜರತುಷ್ಟ್ರ ಅಥವಾ ಜೋರಾಷ್ಟರನಿಗೂ "ಹಓಮ" ಜ್ಞಾನ ಶಕ್ತಿಗಳನ್ನು ಕೊಟ್ಟು, ದೇವ ದೇವನಾದ ಅಹುರಮಜ್ದನ ಹಿರಿಮೆಯನ್ನು ಅರಿಯುವಂತೆ ಮಾಡಿದನು.

'ಯಮ' ಮರ್ತ್ಯರಲ್ಲಿ ಮೊದಲನೆಯವನು: ಇವನ ತಂದೆ ವಿವಸ್ವಾನ್, ತಾಯಿ ಸರಣ್ಯೂ. ದೇವತೆಯೆಂದು ನಿರ್ದಿಷ್ಟನಾಗಿಲ್ಲವಾದರೂ ಪಿತೃಗಳಲ್ಲಿ ಮೊಟ್ಟಮೊದಲನೆಯವನು: ಸತ್ತವರ ಆತ್ಮಗಳ ಮೇಲೆ ಈತನ ಆಳಿಕೆ; ಸತ್ತವರೆಲ್ಲರೂ ಈತನಲ್ಲಿಗೆ ಹೋಗಿ, ಸೋಮಪಾನ ಮಾಡುತ್ತ ಸುಖದಿಂದಿರುತ್ತಾರೆ. ಮರ್ತ್ಯರ ಮಾರ್ಗವನ್ನು—ಎಂದರೆ ಸಾವನ್ನು—ಕಂಡವನು ಇವನು. ಈತನ ದೂತರಾದ ಗೂಗೆ ಪಾರಿವಾಳಗಳೂ, ನಾಲ್ಕು ಕಣ್ಣುಗಳುಳ್ಳ ಎರಡು ನಾಯಿಗಳೂ ಸತ್ತವರು ಪಿತೃಲೋಕಕ್ಕೆ ಸುಖವಾಗಿ ಬರುವಂತೆ ನೋಡಿಕೊಳ್ಳುತ್ತವೆ. ಈತನ ತಂಗಿ ಯಮಿ. "ಯಮ-ಯಮಿ" ಸಂವಾದರೂಪವಾದ ಮಂತ್ರವೊಂದು ಋಗ್ವೇದದಲ್ಲಿದೆ; ಅಲ್ಲಿ ತಂಗಿಯಾದ ಯಮಿ ಅಣ್ಣನನ್ನು ಮದುವೆಯಾಗಲೆಳಸಿ ಕೇಳಿದಾಗ, ಋತವನ್ನು ತಿಳಿದ ಯಮ ಅಂತಹ ಕೆಲಸ ಹಠ ಮನೀಚವೆಂದು ಹೇಳುತ್ತಾನೆ.

ಋಗ್ವೇದದಲ್ಲಿರುವಂತೆ, ಅವೆಸ್ತದಲ್ಲಿಯೂ "ಯಿಮ" ಮತ್ತು "ಯಿಮೇ" ಎಂಬ ಅಣ್ಣ ತಂಗಿಯರಿಬ್ಬರ ಹೆಸರುಗಳು ಇರುತ್ತವೆ. ಗ್ರೀಕರ ಪುರಾಣಗಳಲ್ಲಿ ಅಧೋಲೋಕವನ್ನು ಕಾಯುವ "ಸರ್ಬೆರಸ್" ನಾಯಿಯನ್ನು ಯಮನ ನಾಯಿಗಳೊಡನೆ ಹೋಲಿಸಿ ನೋಡಬಹುದು.

ಈ ಮೇಲೆ ಕಂಡ ದೇವತೆಗಳಲ್ಲದೆ ಇನ್ನೂ ಹಲವು ದೇವತೆಗಳನ್ನು ವೇದದಲ್ಲಿ ಕಾಣುತ್ತೇವೆ. ಅನೇಕ ವೇಳೆ ದೇವತೆಗಳ ಗುಂಪು ಗುಂಪೇ ಒಂದು ಸ್ತೋತ್ರದಲ್ಲಿ ಸ್ತುತವಾಗುತ್ತದೆ. ಮಿತ್ರ, ವರುಣ ಮುಂತಾದ ಹಲವರು ಸೇರಿ "ಆದಿತ್ಯರು" ಎಂಬ ಹೆಸರಿನಿಂದ ಒಂದು ಗುಂಪು; ಮರುತ್ತುಗಳದೊಂದು ಗುಂಪು: ವಸುಗಳದು ಇನ್ನೊಂದು. ಹೀಗೆ ಗುಂಪುಗಳೂ ಸ್ತುತಿಸಲ್ಪಡುವುದುಂಟು. ಕ್ರಮೇಣ ಎಲ್ಲ ದೇವತೆಗಳನ್ನೂ ಒಟ್ಟುಗೂಡಿಸಿ "ವಿಶ್ವೇದೇವತೆಗಳು" ಎಂಬ ಹೆಸರಿನಿಂದ ಸ್ತೋತ್ರ ಮಾಡಿರುವುದೂ ಉಂಟು.

ಪುರುಷದೇವತೆಗಳಲ್ಲದೆ ಸ್ತ್ರೀ ದೇವತೆಗಳೂ ಕೆಲವರು ಕಾಣುತ್ತಾರೆ. ಇವರಲ್ಲಿ ಉಷಃಕಾಲ (ಬೆಳಕು ಹರಿಯುವ ಮುನ್ನ ಬರುವ ಕೆಂಪು ತೇಜಸ್ಸಿನ ಅರುಣೋದಯದ ಕಾಲ)ಕ್ಕೆ ಅಭಿಮಾನದೇವತೆಯಾದ "ಉಷಸ್ಸು" ಅಥವಾ "ಉಷೋದೇವಿ"ಯನ್ನು ಕುರಿತು ಅತಿ ಸುಂದರವಾದ ಮಂತ್ರಗಳಿವೆ. ಉಷೋದೇವಿಯನ್ನು ಕುರಿತು ಹಾಡಿದ ಸೂಕ್ತಗಳಲ್ಲಿ ಕಾವ್ಯಗುಣ ತುಂಬಿ ತುಳುಕುತ್ತದೆ; ಆ ಕಾವ್ಯತೆ ಕೆಲವೆಡೆಯಲ್ಲಿ ಭಾಷಾಂತರಕ್ಕೆ ಸಿಲುಕಲಾರದು. ದ್ಯೌಃಪಿತನ ಮಗಳಾದ ಈ ಉಷೋದೇವಿ ಭೂಮಿ ಅಂತರಿಕ್ಷಗಳ ಮೇರೆಯಲ್ಲಿ ಹುಟ್ಟಿ, ದಯೆಯಿಂದ ಜೀವಿಗಳನ್ನೆಚ್ಚರಿಸುತ್ತಾ, ತನ್ನ ದಿವ್ಯ ಸುಂದರರೂಪ ತೋರಿ

ಸುವಳು. ರಾತ್ರಿ ಉಷಸ್ಸುಗಳು ಅಕ್ಕತಂಗಿಯರು ; ಒಬ್ಬರಾದ ಮೇಲೊಬ್ಬರು ದಿನವೂ ಲೋಕದ ಮಂಗಳಕ್ಕೋಸ್ಕರ ಬಂದು ತೆರಳುವರು. ಇರುಳನ್ನೂ ಇರುಳ ಭಯವನ್ನೂ ಕಳೆಯುತ್ತ

ವಿಚಿತ್ರವರ್ಣದ ವಸನವನುಟ್ಟು
ಸಿಗಿಸಿಗಿಸುವ ಆಭರಣವ ತೊಟ್ಟು
ಜನಗಳ ಮನವನು ಸೂರೆಗೊಳುತ್ತಲಿ
ಬರುವಳಿದೋ ನರ್ತಕಿ ;
ತನ್ನ ಚೆಂದ ತೋರ್ವಳು,
ಜನಕೆ ಸೊಗವ ಬೀರ್ವಳು.

ಮಿಂದು ಎದ್ದುಬಂದ ತೆರದಿ
ಕಿರಣಜಾಲ ಸುತ್ತಲಿರಲು
ಇರುಳ ದೂರಕೋಡಿಸುತ್ತ
ಇರುಳ ಕವಚ ಕಳಚಿಬಿಸುಟು
ಪೂರ್ವದಿಶೆಯೊಳ್ ಬೆಳಗುತ
ಬರುವಳಿದೋ ತೊಳಗುತ.[1]

ನೀರಿನೊಳು ಬೆಳ್ಳಲೆಗಳಂದದಲಿ ಎದ್ದಿಹಳು
ಸಂತಸವ ಬೀರುತ್ತಲಿದೊ, ಉಷೋದೇವಿ.
ಎಲ್ಲ ಮಾರ್ಗಗಳನ್ನು ಸುಗಮಗಳ ತಾ ಮಾಡಿ
ತೋರಿಹಳು ನಮ್ಮೊಳಗೆ—ಕೃಪೆಯು ದಯೆಯು.[2]

ಕೊಡು ನಮಗೆ ಧನವನ್ನು ಹೇ ಉಷೋದೇವಿ—
ಕೆಂಪೆತ್ತುಗಳಮೇಲೆ ಒಯ್ದಿರುವೆ ನೀ ನಿನ್ನ
ಇಷ್ಟಬಂದಂತಿತು ಧನಭಾರವನ್ನು.
ಅಂತರಿಕ್ಷದ ಮಗಳೆ, ದೇವಿ, ಧನವೆಮಗಿತ್ತು
ಮುನ್ನಾದೆ ದರ್ಶನೀಯಳು ; ಇಂದು ಅಂತಾಗು.[3]

1 ಋಗ್ವೇದ ಮಂ. ೫, ಸೂ. ೮೦, ಋ. ೫.
2 ಋಗ್ವೇದ ಮಂ. ೬, ಸೂ. ೬೪, ಋ. ೧.
3 ಋಗ್ವೇದ ಮಂ. ೬, ಸೂ. ೬೪, ಋ. ೫.

ಉಷಸ್ಸಲ್ಲದೆ "ರಾತ್ರಿ" ದೇವಿಯೂ ಋಷಿಗಳ ಮನಸ್ಸನ್ನು ಅಪಹರಿಸಿದ್ದಿರಬೇಕು. ಉಷಸ್ಸಿನ ತಂಗಿಯಾದ ಈ ರಾತ್ರಿದೇವಿ ಕಗ್ಗತ್ತಲ ಇರುಳಲ್ಲ; ತೊಳಗುವ ನಕ್ಷತ್ರಗಳ ಆಭರಣವನ್ನು ತೊಟ್ಟು, ಎಲ್ಲ ಪ್ರಾಣಿಗಳಿಗೂ ನಿದ್ರೆಯನ್ನು ಕೊಟ್ಟು, ಕಷ್ಟಗಳನ್ನು ಪರಿಹರಿಸುವ ತಾಯಿ; ಭಕ್ತನಿಗೆ ತೋಳಗಳ ಕಳ್ಳಕಾಕರ ಭೀತಿಯಿಲ್ಲದಂತೆ ಕಾಪಾಡುವ ದೇವಿ.

ಈ ಸ್ತ್ರೀದೇವತೆಗಳಲ್ಲದೆ. ಪೃಥ್ವೀ, ವಾಕ್, ಆರಣ್ಯಾನೀ (ಕಾಡುಗಳ ಒಡತಿ), ಅದಿತಿ (ಬಂಧನವಿಲ್ಲದಿರುವಿಕೆ) ಮುಂತಾದವರೂ ಸರಸ್ವತೀ ನದಿಯೂ ಅನೇಕ ಸೂಕ್ತಗಳಲ್ಲಿ ಸ್ತುತರಾಗಿದ್ದಾರೆ. ಕೆಲವು ಸಲ ಅಪ್ಸರಃಸ್ತ್ರೀಯರ ಮಾತು ಬಂದಿದೆಯಾದರೂ ಉರ್ವಶಿಯಲ್ಲದೆ ಯಾರೊಬ್ಬರ ಬೇರೆ ಹೆಸರೂ ಕಾಣದು. "ಸೀತಾ" ಎಂದರೆ ನೇಗಿಲಿನಿಂದಾವ ಗೆರೆಯೂ ಕೂಡ ಕೆಲವು ಸಲ ಸ್ತುತಿಸಲ್ಪಟ್ಟಿದೆ. ಶ್ರದ್ಧೆಯೂ ಸೂನೃತ (ಕೊಡುಗೈಯಾಗಿರುವಿಕೆ)ವೂ ಸ್ತುತಿಗೆ ಪಾತ್ರಗಳಾಗಿವೆ. ಹಲವು ಸಲ "ವಾಸ್ತೋಷ್ಪತಿ" (ಮನೆಯೊಡೆಯ) "ಕ್ಷೇತ್ರಸ್ಯ ಪತಿ" (ನೆಲದೊಡೆಯ) ಮುಂತಾದವರೂ ಸ್ತೋತ್ರಗಳಿಂದ ಪ್ರೀತರಾಗಿದ್ದಾರೆ.

ಈ ಅನೇಕ ದೇವತೆಗಳ ಪೂಜೆಯಿಂದ ಏಕದೇವಪೂಜೆ ಹುಟ್ಟಿತೆಂದು ಮೊದಲೇ ತಿಳಿಸಿದೆ. ಈ ಎಲ್ಲ ದೇವತೆಗಳ ಗುಣಗಳೂ ಧರ್ಮಗಳೂ ಕ್ರಮೇಣ ಒಂದೇ ತೆರನಾಗಿ ಕಂಡುಬಂದು 'ಒಬ್ಬ ದೇವರ ಹಲವು ರೂಪಗಳಿರಲಾರವೇ' ಎಂಬ ಭಾವ ಬಂದಿತು. ಹಾಗೆಯೇ ಪ್ರಜಾಪತಿ (ಹುಟ್ಟಿದುದೆಲ್ಲದರ ಒಡೆಯ), ಹಿರಣ್ಯಗರ್ಭ ಇವರ ಭಾವನೆ ಮೊದಲಾಯಿತು. "ಕಸ್ಮೈ ದೇವಾಯ ಹವಿಷಾ ವಿಧೇಮ (ಯಾವ ದೇವರಿಗೆ ಹವಿಸ್ಸನ್ನು

ಕೊಡೋಣ)" ಎಂದು ಒಂದು ಸೂಕ್ತ ಚರ್ಚಿಸಿ ಪ್ರಜಾಪತಿಗೇ ಕೊಡತಕ್ಕದ್ದೆಂದು ನಿರ್ಧರಿಸಿದೆ. ಪ್ರಪಂಚದ ಉತ್ಪತ್ತಿಯ ಬಗೆಗೆ ಬಹು ವಿಧವಾಗಿ ಚರ್ಚೆ ನಡೆದು, ವಿಧವಿಧವಾದ ಉತ್ತರ ಗಳು ಅನೇಕ ಸೂಕ್ತಗಳಲ್ಲಿ ಕಂಡುಬರುತ್ತವೆ. ಮೊದಲು ಇದ್ದು ದೇನು? ಎಂಬ ಪ್ರಶ್ನೆ ಆಗಿನ ಕಾಲದಲ್ಲೇ ಹುಟ್ಟಿ ಋಷಿಗಳ ಮಾತಿನಲ್ಲೇ ಉತ್ತರ ಪಡೆದಿದೆ. ಮುಂದೆ ಸಾಂಖ್ಯದರ್ಶನದಲ್ಲಿ ವಿವರಣೆ ಹೊಂದಿದ ಅನೇಕ ಭಾವನೆಗಳು ಈ ವೇಳೆಗಾಗಲೇ ತಲೆದೋರಿದ್ದುವೆಂಬುದೂ ಗಮನಾರ್ಹವಾದ ಅಂಶ, "ಪುರುಷ" ಸೂಕ್ತದಲ್ಲಿ ಸೃಷ್ಟಿಯನ್ನು ಒಂದು ದೊಡ್ಡ ಯಜ್ಞಕ್ಕೆ ಹೋಲಿಸಿರುವುದನ್ನು ನೋಡಬಹುದು. ಹೀಗೆ ತತ್ವಜಿಜ್ಞಾಸೆ ಮೊಟ್ಟಮೊದಲಿನ ಮೆಟ್ಟಿಲಿನಿಂದ ಸಾಕಷ್ಟು ಎತ್ತರ ಏರುವುದು.

## ೬. ಋಗ್ವೇದ—ಕಾವ್ಯದೃಷ್ಟಿಯಿಂದ

ತತ್ವಾನ್ವೇಷಣದಲ್ಲಲ್ಲದೆ, ಕಾವ್ಯದೃಷ್ಟಿಯಲ್ಲೂ ಸಹ ಋಗ್ವೇದಕ್ಕೆ ಪ್ರಥಮ ಪೂಜೆ ದೊರೆಯಬೇಕು. ಇಂದ್ರನ ಸಾಹಸವನ್ನೂ, ವಾತನ ರಥದ ವೇಗವನ್ನೂ, ಉಷಸ್ಸಿನ ಸೌಂದರ್ಯವನ್ನೂ, ರಾತ್ರಿಯ ಸೊಬಗನ್ನೂ, ವರುಣನ ಉನ್ನತಿಯನ್ನೂ ಎಷ್ಟು ಸುಂದರವಾಗಿ ವರ್ಣಿಸಿರುವರೆಂಬು ದನ್ನು ಮೇಲೆಕೊಟ್ಟಿರುವ ಭಾಷಾಂತರಗಳು ಕೊಂಚವಾದರೂ ತೋರಿಸಿಕೊಟ್ಟಾವು. "ಇಂದ್ರಾಯೆಂದೋ ಪರಿಸ್ರವ" (ಸೋಮ, ಇಂದ್ರನಿಗಾಗಿ ಪ್ರವಹಿಸು) ಮತ್ತು "ಸ ಜನಾಸ ಇಂದ್ರಃ" (ಅವನು, ಜನರೇ, ಇಂದ್ರ) ಎಂಬ ಪಲ್ಲವಿಗಳು ತಿರುತಿರುಗಿ ಬಂದು ಗೀತೆಗಳ ರೂಪಕ್ಕೆ ಒಂದು ಭೂಷಣವಾಗಿವೆ. ಅಲಂಕಾರಗಳ ದೃಷ್ಟಿಯಿಂದ ಉಪಮೆ ಹೆಜ್ಜೆ ಹೆಜ್ಜೆಗೂ ಉಂಟು;

ಉತ್ಪ್ರೇಕ್ಷೆಯೂ ಹಾಗೆಯೇ. ದೇವತೆಯನ್ನು ಭಕ್ತಿಯಿಂದ ಭಾವಿಸಿದವನ ಮಾತು ಎಷ್ಟು ಸುಂದರವಾಗಿರಬಹುದೆಂಬುದಕ್ಕೆ ಋಗ್ವೇದದ ಮಂತ್ರಗಳೇ ಸಾಕ್ಷಿ. ಭಾವದ ಉನ್ನತಿಯಲ್ಲಿಯೂ ರಸಪರಿಪೂರ್ಣತೆಯಲ್ಲಿಯೂ ಕೆಲವು ಮಂತ್ರಗಳು ಈವರೆಗೆ ಉತ್ತಮವಾದುದೆಂದು ಎಣಿಸಿರುವ ಯಾವ ಕಾವ್ಯದೊಡನೆ ಯಾದರೂ ಹೋಲಬಲ್ಲವು. ನಕ್ಷತ್ರಗಳನ್ನು ಇರುಳ ಕಣ್ಗಳೆಂದು ಭಾವಿಸಿದ ವೇದದ ಋಷಿ ಯಾವ ಮಹಾಕವಿಗೆ ತಾನೇ ಸರಿಸಮನಲ್ಲ? ವಾತನ ರಥದ ವೇಗವನ್ನು ಕುರಿತು ವರ್ಣಿಸಿರುವ ಸೂಕ್ತವನ್ನೋದಿದರೆ, ಭಯವುಂಟಾಗುವುದು. ಇಂದ್ರನ ಸಾಹಸದ ವರ್ಣನೆ ಅದ್ಭುತ ಭಯಾನಕರಸಗಳನ್ನು ಉತ್ಪತ್ತಿ ಮಾಡುವುದು; ವರುಣನ ಉನ್ನತಿಯನ್ನೋದಿದಾಗ ಭಯಭಕ್ತಿ ಭಾವಗಳು ಸ್ಫುರಿಸುವುವು. ಹೀಗೆ ರಸೋತ್ಕರ್ಷ, ಭಾವೋನ್ನತಿ, ಪದಬಂಧ, ಚಿತ್ರಸೃಷ್ಟಿ—ಈ ದೃಷ್ಟಿಯಿಂದ ನೋಡಿದರೂ ಋಗ್ವೇದದಲ್ಲಿ ಕಾವ್ಯತೆ ಕಂಡುಬರುತ್ತದೆ. ಆದುದರಿಂದಲೇ ಋಗ್ವೇದ ಭಾರತದ-ಏಕೆ, ಜಗತ್ತಿನ-ಪ್ರಪ್ರಥಮ ಕಾವ್ಯವೆಂದು ಹೇಳಬಹುದು.

ಕಾವ್ಯಸೃಷ್ಟಿಯನ್ನು ಕುರಿತು ಮಾತನಾಡುತ್ತಿರುವಾಗಲೇ ದೇವತೆಗಳಿಗೆ ಸಂಬಂಧಪಡದ ಒಂದು ಸೂಕ್ತವನ್ನು ಹೇಳುವುದು ಅಗತ್ಯವೆನ್ನಿಸುತ್ತದೆ; ಪ್ರಾಪಂಚಿಕ ವಿಷಯಗಳಲ್ಲಿ ಒಂದಾದ "ಜೂಜುಗಾರನ ಅಳಲು" ಎಂಬುದೇ ಆ ಸೂಕ್ತ. ಅದನ್ನು ಇಲ್ಲಿ ಕೊಟ್ಟಿದೆ:[1]

---

[1] ಮಂ. ೧೦, ಸೂ. ೩೪. ಇಲ್ಲಿ 'ಅಕ್ಷ' ಎಂದರೆ ಒಂದು ತೆರನ ಕಾಯಿ; ಇದನ್ನೆಸೆದು ಕೆಳಗೆ ಬಿದ್ದಾಗ ಅದರ ಮೇಲಿನ ಸಂಖ್ಯೆಗಳ ಮೇಲೆ ಜೂಜಾಡುತ್ತಿದ್ದರು. ಭಾಷಾಂತರದಲ್ಲಿ ಇದೇ ಪದಕ್ಕೆ "ದಾಳ" ಎಂಬ ಪದವನ್ನು ಉಪಯೋಗಿಸಿದೆ.

೨. ಕಲಹಮಾಡುವಳಲ್ಲ ಕೋಪಮಾಡುವಳಲ್ಲ
ಎನಗು ಮಿತ್ರರಿಗೆಲ್ಲ ದಯೆಯ ತೋರಿಹಳು;
ದಾಳಗಳು ತಾವ್ರುಳಿ ನಿರ್ಭಾಗ್ಯನಾದ ನಾ
ಸತಿಯ ಮನೆಯಿಂದಾಚೆಗೋಡಿಸಿರುವೆ.

೩. ಅವಳ ತಾಯ್ ದ್ವೇಷಿಪಳು, ಅವಳೆ ಬೇಡೆನ್ನುವಳು
ಇಂಥ ಕಷ್ಟದಲೆನಗೆ ಜನರ ದಯೆಯುಂಟೆ?
ಜೂದುಗಾರನು ತಾನು ಅತಿನಿಷ್ಪ್ರಯೋಜಕನು
ಸಂತೆಮಾಳದಲಿರುವ ಮುದಿಕುದುರೆಯಂತೆ.

೪. ಪೇರಾಸೆಯಿಂದಿರುವ ದಾಳಗಳು ಮನೆಮುರಿದ
ಮಾನವನ ಸತಿಯನ್ನು ಇತರರೆಳಸುವರು.
ತಾಯ್ತಂದೆ ಸೋದರರು ಎಲ್ಲ ಪೇಳುವರಿವನ–
"ನಾವ್ ಕಾಣೆವಿವನನ್ನು, ಒಯ್ಯಿರೈ ಸೆರೆಗೆ."

೫. ಒಬ್ಬನೇ ಇಪ್ಪಾಗ ಇನ್ ಪೋಗೆನೆನ್ನುತಲಿ
ಬಗೆವೆ, ಹಿಂದೆಯೆ ಉಳಿವೆ ಜೂದುಗಾರರ ಬಿಟ್ಟು.
ಕೆಳಗುರುಳ್ದ ಕೆಂದಾಳ ಕೂಗಲೊಡನೆಯೆ ನಾನು
ಜಾರಿಣಿಯ ತೆರದಲ್ಲಿ ಜೂಜುಕಟ್ಟೆಗೆ ನಡೆವೆ.

೬. ದಾಳ ಜೂದಿಗನೆಳೆದು ವಂಚಿಸುತೆ ನೋಯಿಸುತೆ
ಸೋವನಿತ್ತಲು ನೋವನೆತ್ತಲುಂ ಮಾಡಿ
ಹುಡುಗರಂದದಿ ಆಸೆ ತೋರಿಸಿಯು ಹಿಂದೆಳೆದು
ಕೈಯ, ಮುಸುಕುವುವಾಗ ಮಧುರಮಧು ಮಾಯೆಯನು

೭. ಕೆಳಗುರುಳಿ, ಒಡನೆಯೇ ಮೇಲಕ್ಕೆ ತಾನುರುಳಿ
ಕೈಯಿಲ್ಲದಿರ್ದೊಡೆಯು ನರನಮೇಲ್ ಕೈಮಾಡಿ
ಹಾಸ ಮೇಲಿಕ್ಕಿತು ತಾ ಮಾಯೆಯಿದ್ದಿಲ ತೆರದಿ
ತಣ್ಣಗಿರುತಲೆ ಹೃದಯ ಬೂದಿಮಾಡುವುದು.

ಉತ್ಪ್ರೇಕ್ಷೆಯೂ ಹಾಗೆಯೇ. ದೇವತೆಯನ್ನು ಭಕ್ತಿಯಿಂದ ಭಾವಿಸಿದವನ ಮಾತು ಎಷ್ಟು ಸುಂದರವಾಗಿರಬಹುದೆಂಬುದಕ್ಕೆ ಋಗ್ವೇದದ ಮಂತ್ರಗಳೇ ಸಾಕ್ಷಿ. ಭಾವದ ಉನ್ನತಿಯಲ್ಲಿಯೂ ರಸಪರಿಪೂರ್ಣತೆಯಲ್ಲಿಯೂ ಕೆಲವು ಮಂತ್ರಗಳು ಈವರೆಗೆ ಉತ್ತಮವಾದುದೆಂದು ಎಣಿಸಿರುವ ಯಾವ ಕಾವ್ಯದೊಡನೆಯಾದರೂ ಹೋಲಬಲ್ಲವು. ನಕ್ಷತ್ರಗಳನ್ನು ಇರುಳ ಕಣ್ಗಳೆಂದು ಭಾವಿಸಿದ ವೇದದ ಋಷಿ ಯಾವ ಮಹಾಕವಿಗೆ ತಾನೇ ಸರಿಸಮನಲ್ಲ? ವಾತನ ರಥದ ವೇಗವನ್ನು ಕುರಿತು ವರ್ಣಿಸಿರುವ ಸೂಕ್ತವನ್ನೋದಿದರೆ, ಭಯವುಂಟಾಗುವುದು. ಇಂದ್ರನ ಸಾಹಸದ ವರ್ಣನೆ ಅದ್ಭುತ ಭಯಾನಕರಸಗಳನ್ನು ಉತ್ಪತ್ತಿ ಮಾಡುವುದು; ವರುಣನ ಉನ್ನತಿಯನ್ನೋದಿದಾಗ ಭಯಭಕ್ತಿ ಭಾವಗಳು ಸ್ಫುರಿಸುವುವು. ಹೀಗೆ ರಸೋತ್ಕರ್ಷ, ಭಾವೋನ್ನತಿ, ಪದಬಂಧ, ಚಿತ್ರಸೃಷ್ಟಿ—ಈ ದೃಷ್ಟಿಯಿಂದ ನೋಡಿದರೂ ಋಗ್ವೇದದಲ್ಲಿ ಕಾವ್ಯತೆ ಕಂಡುಬರುತ್ತದೆ. ಆದುದರಿಂದಲೇ ಋಗ್ವೇದ ಭಾರತದ–ಏಕೆ, ಜಗತ್ತಿನ–ಪ್ರಪ್ರಥಮ ಕಾವ್ಯವೆಂದು ಹೇಳಬಹುದು.

ಕಾವ್ಯದೃಷ್ಟಿಯನ್ನು ಕುರಿತು ಮಾತನಾಡುತ್ತಿರುವಾಗಲೇ ದೇವತೆಗಳಿಗೆ ಸಂಬಂಧಪಡದ ಒಂದು ಸೂಕ್ತವನ್ನು ಹೇಳುವುದು ಅಗತ್ಯವೆನ್ನಿಸುತ್ತದೆ; ಪ್ರಾಪಂಚಿಕ ವಿಷಯಗಳಲ್ಲಿ ಒಂದಾದ "ಜೂಜುಗಾರನ ಅಳಲು" ಎಂಬುದೇ ಆ ಸೂಕ್ತ. ಅದನ್ನು ಇಲ್ಲಿ ಕೊಟ್ಟಿದೆ:[1]

---

[1] ಮಂ. ೧೦, ಸೂ. ೩೪. ಇಲ್ಲಿ 'ಅಕ್ಷ' ಎಂದರೆ ಒಂದು ತೆರನ ಕಾಯಿ; ಇದನ್ನೆಸೆದು ಕೆಳಗೆ ಬಿದ್ದಾಗ ಅದರ ಮೇಲಿನ ಸಂಖ್ಯೆಗಳ ಮೇಲೆ ಜೂಜಾಡುತ್ತಿದ್ದರು. ಭಾಷಾಂತರದಲ್ಲಿ ಇದೇ ಪದಕ್ಕೆ "ದಾಳ" ಎಂಬ ಪದವನ್ನು ಉಪಯೋಗಿಸಿದೆ.

೨. ಕಲಹವಾಡುವಳಲ್ಲ ಕೋಪವಮಾಡುವಳಲ್ಲ
ಎನಗು ಮಿತ್ರರಿಗೆಲ್ಲ ದಯೆಯು ತೋರಿಹಳು;
ದಾಳಗಳು ತಾವುರುಳಿ ನಿರ್ಭಾಗ್ಯನಾದ ನಾ
ಸತಿಯ ಮನೆಯಿಂದಾಚೆಗೋಡಿಸಿರುವೆ.

೩. ಅವಳ ತಾಯ್ ದ್ವೇಷಿಪಳು, ಅವಳೆ ಬೇಡೆನ್ನುವಳು
ಇಂಥ ಕಷ್ಟದಲೆನಗೆ ಜನರ ದಯೆಯುಂಟೆ?
ಜೂದುಗಾರನು ತಾನು ಅತಿನಿಷ್ಪ್ರಯೋಜಕನು
ಸಂತೆಮಾಳದಲಿರುವ ಮುದಿಕುದುರೆಯಂತೆ.

೪. ಪೇತಾಸೆಯಿಂದಿರುವ ದಾಳಗಳು ಮನೆಮುರಿದ
ಮಾನವನ ಸತಿಯನ್ನು ಇತರರೆಳಸುವರು.
ತಾಯ್ತಂದೆ ಸೋದರರು ಎಲ್ಲ ಪೇಳುವರಿವನ–
“ನಾವ್ ಕಾಣೆವಿವನನ್ನು, ಒಯ್ಯಿರೈ ಸೆರೆಗೆ.”

೫. ಒಬ್ಬನೇ ಇದ್ದಾಗ ಇನ್ ಪೋಗೆನೆನ್ನುತಲಿ
ಬಗೆವೆ, ಹಿಂದೆಯೆ ಉಳಿವೆ ಜೂದುಗಾರರ ಬಿಟ್ಟು.
ಕೆಳಗುರುಳ್ದ ಕೆಂದಾಳ ಕೂಗಲೊಡನೆಯೆ ನಾನು
ಜಾರಿಣಿಯ ತೆರದಲ್ಲಿ ಜೂಜುಕಟ್ಟೆಗೆ ನಡೆವೆ.

೬. ದಾಳ ಜೂದಿಗನೆಳೆದು ವಂಚಿಸುತೆ ನೋಯಿಸುತೆ
ಸೋಲನಿತ್ತಲು ನೋವನಿತ್ತಲುಂ ಮಾಡಿ
ಹುಡುಗರಂದದಿ ಆಸೆ ತೋರಿಸಿಯು ಹಿಂದೆಳೆದು
ಕೈಯ, ಮುಸುಕುವುವಾಗ ಮಧುರಮಧು ಮಾಯೆಯನು

೭. ಕೆಳಗುರುಳಿ, ಒಡನೆಯೇ ಮೇಲಕ್ಕೆ ತಾನುರುಳಿ
ಕೈಯಿಲ್ಲದಿರ್ದೊಡೆಯು ನರನಮೇಲ್ ಕೈಮಾಡಿ
ದಾಸ ನೆಲಕ್ಕೆಸೆಯೆ ತಾ ಮಾಯೆಯಿದ್ದಿಲ ತೆರದಿ
ತಣ್ಣಗಿರುತಲೆ ಹೃದಯ ಬೂದಿಮಾಡುವುದು.

೭. ದುಃಖಿತಳು ಜೂದಿಗನ ಸತಿ ಪರಿತ್ಯಕ್ತೆ,
ದುಃಖಿತಳು ಅವನ ತಾಯ್, ನೆಲೆಯಿಲ್ಲದಲೆವವನ-
ಋಣಿಯಾಗಿ ಭಯವಪೊಂದಿ ಹಣವನರಸುತ್ತ
ಇರುಳಿನಲಿ ಪರಗೃಹದ ಬಳಿ ಸುಳಿಯುತಿಹನು.

೮. ಅನ್ಯಸತಿಯರ ಮನೆಯ ಅಚ್ಚುಕಟ್ಟನು ಕಂಡು
ಜೂದಿಗನ ಹೃದಯ ನೊಂದಶ್ರು ಸುರಿಸುವುದು.
ಆದರೂ ಉದಯದಲಿ ಕಂದುಬಣ್ಣದ ಕುದುರೆ[1]
ಹೂಡಿ, ರವಿ ತಾನಳಿಯೆ, ತಿರುಕನಾಗಿಹನು.

೯. ಜೂಜಿನುಪಕರಣಗಳೆ ನಿಮ್ಮ ಗಣಮುಖ್ಯನಿಗೆ
ಇದಿಗೊ, ಕೈಜೋಡಿಸಿದೆ—ನಮಸ್ಕಾರ.
ಜೂದಿಗಿನ್ನೆಂದಿಗೂ ಧನವನಾರ್ಜಿಸೆ ನಾನು
ಶಪಥವಿದು-ಹೇಳುವೆನು ಸತ್ಯವಾಗಿ.

ಈ ಮೇಲಿನ ಮಾತುಗಳ ಹಿಂದೆ ಅಡಗಿರುವ ನೋವೆಷ್ಟು, ದುಃಖವೆಷ್ಟು? ಮಾತಿನ ರೀತಿ ಚೆಲುವಾಗಿದೆ. ಅಂದಿನ ಈ ಮಾತುಗಳನ್ನು ಇಂದು ಜೂಜಾಡಿ ಮನೆಮಠ ಹಾಳುಮಾಡಿಕೊಂಡವನೂ ಹೇಳಿಕೊಳ್ಳಬಹುದು. ಇನ್ನೊಂದು ಸೂಕ್ತದಲ್ಲಿ ಮನುಷ್ಯನು ಆಸೆಗೆ ಸಿಕ್ಕಿ ಎಂತೆಂತಹ ದುಷ್ಕಾರ್ಯಗಳನ್ನು ಮಾಡುವನೆಂಬುದು ಕಾಣುತ್ತದೆ. ಅಲ್ಲದೆ ಕೆಲವು "ಸಂವಾದ ಸೂಕ್ತಗಳು" ಋಗ್ವೇದದಲ್ಲಿವೆ. ಸರಮಾ-ಪಣಿಗಳ ಸಂವಾದವನ್ನು ಇಂದ್ರನನ್ನು ವರ್ಣಿಸಿದಾಗಲೇ ಸೂಚಿಸಿದ್ದಾಯಿತು. ಮಹಾಕವಿ ಕಾಳಿದಾಸನ ವಿಕ್ರಮೋರ್ವಶೀಯ ಎಂಬ ನಾಟಕದ ಮೂಲವಸ್ತುವಾದ ಪುರೂರವಸ್ಸೆಂಬ ರಾಜನ ಮತ್ತು

[1]ಜೂಜಿನ ದಾಳಗಳು.

ಊರ್ವಶೀ ಎಂಬ ಅಪ್ಸರಸ್ತ್ರೀಯ ಪರಸ್ಪರ ಸಂವಾದ ಮೊದಲು ಋಗ್ವೇದದಲ್ಲಿ ಕಾಣುತ್ತದೆ. ಯಮ-ಯಮೀ ಸಂವಾದವನ್ನೂ ಸೂಚಿಸಿದ್ದಾಗಿದೆ. ನಗೆಯನ್ನು ಉತ್ಪಾದನೆಮಾಡಲು ಋಗ್ವೇದ ದಲ್ಲಿ ಎಲ್ಲೂ ಅವಕಾಶವಿಲ್ಲ; ಆದರೂ ಒಂದೆಡೆ, ವರ್ಷವೂ ಸುಮ್ಮನಿದ್ದು, ಮಳೆಗಾಲ ಬಂದೊಡನೆ ವಟಗುಟ್ಟುವ ಕಪ್ಪೆಗಳ ಧ್ವನಿಯನ್ನು. ವರ್ಷವೂ ಸುಮ್ಮನಿದ್ದು ಒಮ್ಮೆಂದೊಮ್ಮೆ ಗುರುವೂ ಶಿಷ್ಯರೂ ಸೇರಿ ಹೇಳುವ ಧ್ವನಿಗೆ ಹೋಲಿಸಿದ್ದಾನೆ ಒಬ್ಬ ಋಷಿ. ಋಗ್ವೇದದಲ್ಲಿ ಎರಡು ಸೂಕ್ತಗಳು ಒಗಟೆಗಳು. ದೇವತೆಯ ಧರ್ಮ, ಆಯುಧ, ರೂಪ—ಇವುಗಳಿಂದ ವರ್ಣಿಸಿ ಹೆಸರು ಹೇಳದಿರುವುದು ಮುಂತಾದ ಈ ತರದ ಒಗಟೆಗಳ ಸ್ವರೂಪ. ಉದಾ:-

ಹನ್ನೆರಡು ಪಟ್ಟೆಗಳು, ಒಂದೆ ಚಕ್ರ,
ಮೂರು ನಾಭಿಗಳುಂಟು,—ಅರರಿವರು ?
ಮೂನ್ನೂರ ಅರವತ್ತು ಅರಗಳುಂಟಲ್ಲಿ
ಚಲಿಸುವಂತಹ ಅರಗಳ್—ಅರರಿವರು ?

ಉತ್ತರ: ಹನ್ನೆರಡು ತಿಂಗಳ ಒಂದು ಸಂವತ್ಸರ, ಬಿಸಿಲು ಮಳೆ ಚಳಿಗಾಲಗಳೆಂಬ ಮೂರು ಕಾಲಗಳು, ಮುನ್ನೂರ ಅರವತ್ತು ಹಗಲು ರಾತ್ರಿಗಳು. ಹೀಗೆಯೇ ಇನ್ನೂ ಕೆಲವಿವೆ.

ವಿವಾಹ ಮತ್ತು ಅಪರಕರ್ಮಗಳಿಗೆ ಸಂಬಂಧಿಸಿದ ಕೆಲವು ಸೂಕ್ತಗಳು ಋಗ್ವೇದದಲ್ಲಿವೆ. ಸೂರ್ಯಾಸೂಕ್ತವೆಂಬಲ್ಲಿ (೧೦, ಮಂ. ಸೂ. ೮೫) ಅನೇಕ ದೇವತೆಗಳನ್ನು ಕರೆದು ದಂಪತಿಗಳ ಶುಭವನ್ನು ಕೋರಿ ಹರಸುವಂತೆ ಪ್ರಾರ್ಥನೆಯಿರುವುದಲ್ಲದೆ, ಬಹು ಗಂಭೀರವಾದ, ಆದರೂ ಅತಿ ಸುಲಭವಾದ ರೀತಿಯಲ್ಲಿ

ಪರಸ್ಪರರನ್ನು ಪರಿಚಯಮಾಡಿಕೊಡುವ ಬಗೆ ಬಹಳ ಮುದ್ದಾದುದು.

ಅಪರಕರ್ಮಗಳಿಗೆ ಸಂಬಂಧಪಟ್ಟ ಸೂಕ್ತಗಳೂ ಕೆಲವುಂಟು. ಅವುಗಳಲ್ಲಿ ಚಿತೆಯಮೇಲಿಟ್ಟ ಶವವನ್ನುದ್ದೇಶಿಸಿ, ಬೆಂಕಿಯನ್ನು ಉದ್ದೇಶಿಸಿ, ಯಮನನ್ನು ಕುರಿತು ಸ್ತುತಿಗಳೂ ಪ್ರಾರ್ಥನೆಗಳೂ ಇವೆ. ಸಾಮಾನ್ಯವಾಗಿ ಔರ್ಧ್ವದೈಹಿಕಕ್ರಿಯೆ ಅಗ್ನಿಸಂಸ್ಕಾರವೇ ಆಗಿದ್ದಿತೆಂದು ಕಾಣುತ್ತದೆ; ಆದರೆ, ಬಹುಕಾಲದ ಹಿಂದೆ ಹೂಳುವುದೂ ಇದ್ದಿರಬೇಕೆಂಬುದು ಒಂದು ಸೂಕ್ತದಲ್ಲಿ ಬರುವ ಮಾತುಗಳಿಂದ ತೋರುತ್ತದೆ.

ಒಂದು ಸೂಕ್ತದಲ್ಲಿ ಚೇಳಿನ ವಿಷಕ್ಕೆ ಪ್ರತಿಯಾಗಿ ಜಪಿಸಬೇಕಾದ ಮಂತ್ರಗಳಿವೆ. ಇನ್ನೊಂದೆಡೆ ಜ್ವರವನ್ನೋಡಿಸುವುದಕ್ಕೆ ಒಂದು ಮಂತ್ರ. ಕೆಟ್ಟಕಣ್ಣಿನ ದೋಷ, ನೀರಿನ ದೋಷ, ಇತ್ಯಾದಿ ದೋಷನಿವಾರಣೆಗೆಲ್ಲ ಮಂತ್ರಗಳಿವೆ.

ಇದಲ್ಲದೆ ಋಗ್ವೇದದಲ್ಲಿ ದಾನಸ್ತುತಿಗಳು ಎಂಬ ಹೆಸರಿನವು ಕೆಲವಿವೆ. ಇವುಗಳಲ್ಲಿ ಋಷಿ ತನಗೆ ಆಶ್ರಯಕೊಟ್ಟ ರಾಜನನ್ನೋ ಧನಿಕರನ್ನೋ ಕುರಿತು ಸ್ತೋತ್ರಮಾಡಿದ್ದಾನೆ. ಈ ದಾನಸ್ತುತಿಗಳಲ್ಲಿ ಕೆಲವು ರಾಜರ ಹೆಸರು ಕುಲಗೋತ್ರಗಳು ಗೊತ್ತಾಗುತ್ತವೆ. ಇಷ್ಟಲ್ಲದೆ ಇವುಗಳಿಗೆ ಬೇರೇನೂ ಹಿರಿಮೆಯಿಲ್ಲ. ಆದರೆ, ಒಂದೇ ಒಂದು ಸೂಕ್ತ (ಮಂ. ೧೦, ಸೂ. ೧೧೭) ಮಾತ್ರ ನಿಜವಾದ 'ದಾನಸ್ತುತಿ' ಔದಾರ್ಯದ ಸ್ತುತಿ. ಒಂದು ಪದ್ಯವನ್ನು ಉದಾಹರಿಸಬಹುದು:

ಹಸಿವಿತ್ತು ಸಾಯಿಸರು ದೇವತೆಗಳಾರೂ
ಸಾವು ಬರ್ಪುದು ಉಂಡು ತೇಗಿರ್ದವನಿಗೂ–
ದಾತೃವಿನ ಧನವವೆಂದೂ ಕರಗವೆಯೆ ಇಹುದು
ಜಿಪುಣನಿಗೆ "ಅಯ್ಯೊ" ಎಂದೆಂಬರಾರೂ ಇರರು–

## ೭. ಋಗ್ವೇದದ ಕಾಲ

ವೇದಗಳೆಲ್ಲವರಂತೆ ಋಗ್ವೇದವೂ ಅನಾದಿಯೆಂದು ಹೇಳುವ ಸಂಪ್ರದಾಯವಿದೆ. ವೇದಗಳು ಪ್ರಲಯಕಾಲದಲ್ಲಿ ಹುದುಗಿದ್ದು ಸೃಷ್ಟಿಯಾದಾಗ ಬ್ರಹ್ಮನಿಂದ ಹೊರಗೆ ಬರುವುವೆಂದು ಹೇಳುವುದು ರೂಢಿಯಾಗಿದೆ. ಪರಮಪವಿತ್ರವಾದ ಈ ವೇದಗಳು "ಹುಟ್ಟಿದುವೆಂದು" ಹೇಳಿದರೆ ಅವಕ್ಕೆ ಒಂದು ನ್ಯೂನತೆ ಎಂದು ಭಾವಿಸಿ ಹೀಗೆ ಹೇಳಿದ್ದರೂ ಇರಬಹುದು; ನಮ್ಮ ತಿಳಿವಿಗೆ ಸಿಲುಕುವ ಕಾಲಕ್ಕಿಂತಲೂ ಹಿಂದಿನಿಂದ ಇರುವುವದರಿಂದ, ಇವರ ಕಾಲ ನಮಗೆ ತಿಳಿಯದೆ ಇದೆಯೆಂದು ಇದ್ದರೂ ಇರಬಹುದು.

ವೇದದ ಕಾಲದ ವಿಚಾರವನ್ನು ಮೊದಲು ಅನ್ವೇಷಣೆ ಮಾಡತೊಡಗಿದುದು ಯೂರೋಪ್ ಖಂಡದಲ್ಲಿ. ಕಳೆದ ಶತಮಾನದ ಮಧ್ಯದವರೆಗೆ ಯಾರೊಬ್ಬರೂ ನಿಕರವಾದ ಅಭಿಪ್ರಾಯವನ್ನು ಕೊಟ್ಟಿರಲಿಲ್ಲ. ಮೊಟ್ಟಮೊದಲು ಕಾಲನಿರ್ಣಯವನ್ನು ಮಾಡಲು ಯತ್ನಿಸಿದವನು ಮ್ಯಾಕ್ಸ್‌ಮುಲರ್. ಕ್ರಿ.ಪೂ. ೧೨೦೦ರ ವೇಳೆಗೆ ಋಗ್ವೇದದ ಮೊದಲಿನ ಮಂತ್ರಗಳ ರಚನೆ ಪ್ರಾರಂಭವಾಯಿತೆಂದು ಈತನ ಊಹೆ. ಭಾಷೆಯ ಬೆಳೆವಣಿಗೆ, ಅವೆಸ್ತಕ್ಕೂ ವೇದಕ್ಕೂ ಇರುವ ಹೋಲಿಕೆ—ಇವೆಲ್ಲ ಸಾಕ್ಷ್ಯಗಳನ್ನೂ ಕೂಲಂಕಷವಾಗಿ ಪರೀಕ್ಷೆಮಾಡಿ ಕೆಲವರು ಮ್ಯಾಕ್ಸ್‌ಮುಲರ್ ಹೇಳಿದ ಕ್ರಿ ಪೂ. ೧೨೦೦, ಅಥವಾ ಇನ್ನು ಕೊಂಚ ಹಿಂದೆ ಎಂದರೆ ಕ್ರಿ.ಪೂ. ೧೫೦೦ ವೇದಮಂತ್ರಗಳ ರಚನೆಗೆ ಆರಂಭವಾದ ಕಾಲ ಎಂದು ಸಿರ್ಧರಿಸಿದರು. ಇವರಲ್ಲಿ ಮುಖ್ಯರಾದವರು ಮೆಕ್ಡಾನೆಲ್, ಕೀತ್ ಎಂಬವರು.

ಬ್ರಾಹ್ಮಣಗಳಲ್ಲಿ ಕಂಡುಬರುವ ಕೆಲವು ಜ್ಯೋತಿಷದ ವಾಕ್ಯಗಳ ಆಧಾರದ ಮೇಲೆ ಲೆಕ್ಕಹಾಕಿ "ಹೌಗ್" ಎಂಬ ಪಂಡಿತನು ಸುಮಾರು ಕ್ರಿ.ಪೂ. ೨೪೦೦ರಿಂದ ೨೦೦೦ದ ಒಳಗೆ ಅತಿ ಪ್ರಾಚೀನವೆಂದು ಪರಿಗಣಿತವಾಗಿರುವ ಸೂಕ್ತಗಳ ರಚನೆಯಾಗಿರಬಹುದೆಂದು ಊಹಿಸಿದನು.

ಹರ್ಮನ್ ಯಾಕೊಬಿ ಮತ್ತು ಬಾಲಗಂಗಾಧರತಿಲಕರು-ಇವರಿಬ್ಬರೂ ಬೇರೆ ಬೇರೆಯಾಗಿ ಖಗೋಳಶಾಸ್ತ್ರದ ಸಂಬಂಧವುಳ್ಳ ವಾಕ್ಯಗಳನ್ನೆಲ್ಲಾ ಪರೀಕ್ಷಿಸಿ, ಲೆಕ್ಕಗಳನ್ನು ಮಾಡಿ ಕಡೆಗೆ ಬೇರೆ ಬೇರೆ ಸಿದ್ಧಾಂತಗಳಿಗೆ ಬಂದಿದ್ದಾರೆ. ಯಾಕೊಬಿ ವೇದದ ಋಕ್ಕುಗಳ ರಚನೆಯ ಕಾಲ ಕ್ರಿ. ಪೂ. ೪೫೦೦ ಎಂದು ಹೇಳುತ್ತಾನೆ. ಕೆಲವು ಮಂತ್ರಗಳು ಕ್ರಿ.ಪೂ. ೬೦೦೦ದಲ್ಲಿದ್ದ ಸ್ಥಿತಿಯನ್ನು ವರ್ಣಿಸುತ್ತವೆ ಎಂದು ತಿಲಕರ ಅಭಿಪ್ರಾಯ.

ಬೂಲರ್ ಎಂಬ ಪಂಡಿತನಾದರೊ ಶಾಸನಗಳನ್ನು ಪರೀಕ್ಷಿಸಿ, ದಕ್ಷಿಣ ದೇಶಕ್ಕೆ ಆರ್ಯರು ಬಂದುದು ಕ್ರಿ.ಪೂ. ೩ನೆಯ ಶತಮಾನವಾದರೂ, ಕ್ರಿ. ಪೂ. ೭ ಅಥವಾ ೮ನೆಯ ಶತಮಾನದ ವೇಳೆಗಾಗಲೇ ಆರ್ಯಧರ್ಮದ ಗಾಳಿ ದಕ್ಷಿಣಕ್ಕೂ ಬಂದಿದ್ದಿತೆಂಬುದು ತಿಳಿಯುವುದರಿಂದ; ಇದಕ್ಕಿಂತ ಬಹಳ ಮುಂಚೆ ಎಂದರೆ ಸುಮಾರು ೭೦೦ ವರ್ಷಗಳಿಗೆ ಮುಂಚೆ ವೇದದ ಸಂಪೂರ್ಣ ಸ್ಥಿತಿಯಿದ್ದಿರಬೇಕೆಂದು ತಿಳಿಸುತ್ತಾನೆ.

ಏಷ್ಯಮೈನರ್‌ನಲ್ಲಿರುವ ಬೋಗಾಸ್ – ಕೊಯಿ ಎಂಬಲ್ಲಿ ಕೆಲವು ಮಣ್ಣಿನ ಹಲಗೆಗಳು ಸಿಕ್ಕಿರುವುವು. ಅವುಗಳಲ್ಲಿ ಹಿಟ್ಟೈಟ್ ಜನರ ದೇವತೆಗಳ ಹೆಸರುಗಳಲ್ಲದೆ, ವೇದದ ದೇವತೆಗಳಾದ ಮಿತ್ರ, ವರುಣ, ಇಂದ್ರ, ನಾಸತ್ಯಾ (ಅಶ್ವಿನೀದೇವತೆ

ಗಳು) ಮುಂತಾದ ಹೆಸರುಗಳು ಕಂಡುಬರುತ್ತವೆ. ಬೋಗಾಸ್-ಕೊಯಿ ಸಂಶೋಧನೆಗಳು ಕ್ರಿ.ಪೂ. ೧೪ನೆಯ ಶತಮಾನದ ಆದಿಭಾಗಕ್ಕೆ ಸಂಬಂಧಿಸಿದವು. ಆದುದರಿಂದ ವೇದದ ರಚನೆ ಕ್ರಿ.ಪೂ. ೧೪ನೆಯ ಶತಮಾನಕ್ಕಿಂತ ಬಹಳ ಮುಂಚೆ ಆಗಿಯೇ ಇದ್ದಿರಬೇಕೆಂದು ಇನ್ನೊಂದು ಅಭಿಪ್ರಾಯ.

ಇನ್ನು ಒಬ್ಬಿಬ್ಬರು ವೇದಗಳ ರಚನೆಗೆ ಮೊದಲಾದ ಕಾಲ ಕ್ರಿ. ಪೂ. ೧೬೦೦, ಕ್ರಿ. ಪೂ. ೨೦೦೦೦ ಎಂದು ವಾದಿಸುತ್ತಾರೆ. ಭಾಷೆ ಧರ್ಮ ಇವುಗಳ ಬೆಳೆವಣಿಗೆ, ಅವೆಸ್ತದ ಸಾಕ್ಷ್ಯ ಮುಂತಾದ ಹಲವು ಮುಖ್ಯ ಸಾಕ್ಷ್ಯಗಳ ಮುಂದೆ ಈ ವಾದ ನಿಲ್ಲಲಾರದು.

ಅಂತೂ, ವೇದದ ರಚನೆ ಮೊದಲಾದುದು ಯಾವಾಗ ಎಂಬ ಪ್ರಶ್ನೆಗೆ ಇನ್ನೂ ನಿಷ್ಕೃಷ್ಟವಾದ ಉತ್ತರ ದೊರೆತಿಲ್ಲ; ದೊರೆಯುವುದೋ ಇಲ್ಲವೋ ಹೇಳುವುದು ಕಷ್ಟ. ಆದರೆ, ಬಹಳ ಹಿಂದೆ. ಯೇಸುಕ್ರಿಸ್ತ ಹುಟ್ಟುವುದಕ್ಕೆ ಒಂದೂವರೆ ಅಥವಾ ಎರಡು ಸಾವಿರ ವರ್ಷಗಳಿಗಿಂತ ಹಿಂದೆಯೇ ವೇದದ ರಚನೆ ಪ್ರಾರಂಭವಾಗಿದ್ದಿತೆಂದು ಖಂಡಿತವಾಗಿ ಹೇಳಬಹುದು.

## ೮. ವೇದಾರ್ಥವನ್ನು ತಿಳಿಯಲು ಸಾಧನಗಳು

ವೇದಮಂತ್ರಗಳ ಅರ್ಥವನ್ನು ಸರಿಯಾಗಿ ತಿಳಿಯಬೇಕೆಂದು ಬಹಳ ಹಿಂದಿನಿಂದಲೂ ಪ್ರಯತ್ನ ನಡೆದಿದೆ. ಮೊಟ್ಟಮೊದಲ ಪ್ರಯತ್ನ 'ಬ್ರಾಹ್ಮಣ'ಗಳಲ್ಲಿ ಕಂಡುಬರುತ್ತದೆ. ಬ್ರಾಹ್ಮಣಗಳ ಸ್ವರೂಪವನ್ನು ವಿವರಿಸುತ್ತ, ಬ್ರಾಹ್ಮಣಗಳು ವೇದಮಂತ್ರಗಳ ಬಗೆಗೆ ವಿವರಣೆಯನ್ನೂ ಇನ್ನೂ ಇತರ ಅನೇಕ ವಿಷಯಗಳನ್ನೂ ಹೇಳುತ್ತವೆಂದು ಹಿಂದೆಯೇ ತಿಳಿಸಿದೆ. ಅನೇಕ ವೇಳೆ ಬ್ರಾಹ್ಮಣ

ಗಳಲ್ಲಿ ಒಂದು ಪದ ಹೇಗೆ ಹುಟ್ಟಿತು ಎಂಬ ವಿಷಯ[1] ಕೂಡ ಕಂಡುಬರುವುದರಿಂದ, ಅಂತಹ ಪದಗಳ ಅರ್ಥ ನಮಗೆ ತಿಳಿಯಲು ಅನುಕೂಲವಾಗುತ್ತದೆ. ಕೆಲವು ಸಲ ಮಾತ್ರ ಇಡಿಯ ಮಂತ್ರಗಳ ಅರ್ಥ ಕೂಡ ಸಿಕ್ಕುತ್ತದೆ. ಎರಡನೆಯದಾಗಿ, ಪ್ರಾತಿಶಾಖ್ಯಗಳೂ ಕೆಲವು ಸಲ ಅರ್ಥಜ್ಞಾನಕ್ಕೆ ಸಹಾಯಕವಾಗುತ್ತವೆ. ಇವೆಲ್ಲಕ್ಕಿಂತಲೂ ಮಿಗಿಲಾಗಿ ವೇದಾಂಗವಾದ "ನಿರುಕ್ತ" ಸಹಾಯಮಾಡುತ್ತದೆ. ಈಗ ಉಪಲಬ್ಧವಾಗಿರುವ ನಿರುಕ್ತ ಯಾಸ್ಕನೆಂಬುವನು ಬರೆದುದು ; ಈತನೇ ವೇದದಲ್ಲಿ ಪ್ರಯುಕ್ತವಾಗಿರುವ ಪದಗಳಲ್ಲಿ ಸಮಾನಾರ್ಥಕ ಪದಗಳನ್ನು ಒಂದೆಡೆ ಒಟ್ಟುಹಾಕಿ "ನಿಘಂಟು"ವನ್ನೂ ಬರೆದಿದ್ದಾನೆ. ಈ ನಿರುಕ್ತ ನಿಘಂಟುಗಳ ಪ್ರಯೋಜನ ಅಷ್ಟಿಷ್ಟಲ್ಲ; ಇವಿಲ್ಲದಿದ್ದರೆ ವೇದದ ಬಹುಭಾಗ ಅರ್ಥವಾಗುತ್ತಲೇ ಇರಲಿಲ್ಲ. ಆದರೂ, ಯಾಸ್ಕನ ಕಾಲಕ್ಕಾಗಲೇ ವೇದದ ಅರ್ಥದ ಬಗೆಗೆ ಸಂದೇಹಗಳು ತಲೆದೋರಿದ್ದಿರಬೇಕು : ಏಕೆಂದರೆ, ಸುಮಾರು ಸಾವಿರ ವರ್ಷಗಳಾದರೂ ಕಳೆದುಹೋಗಿದ್ದುದರಿಂದ, ಅನೇಕರು ಅನೇಕ ವಿಧವಾದ ಅರ್ಥಗಳನ್ನು ಹೇಳಿದ್ದರಾದುದರಿಂದ. ಯಾಸ್ಕನೂ ಸಹ ಒಂದೇ ಪದಕ್ಕೆ ಎರಡು, ಮೂರು, ನಾಲ್ಕು ಅರ್ಥಗಳನ್ನು ಕೊಡುತ್ತಾನೆ. ಆ ವೇಳೆಗಾಗಲೇ ಕೆಲವರು ವೇದದ ಅರ್ಥಗಳನ್ನು ತಿಳಿಯಲಾರದೆ, ಮಂತ್ರಗಳಲ್ಲಿ ಅರ್ಥವೇ ಇಲ್ಲವೆನ್ನುವ ತನಕ ಹೋಗಿದ್ದರು. ಯಾಸ್ಕನ ಕಾಲಕ್ಕಾಗಲೇ ಮೊದಲಿನ ಅರ್ಥಗಳು ಮರೆತುಹೋಗಿದ್ದರೂ ಸಹ, ಈ ನಿರುಕ್ತ ನಿಘಂಟುಗಳನ್ನು

1 ಉದಾ: "ಆಪ್ರೀಭಿರಾಪ್ರೀಣಾತಿ"—ಐತರೇಯ ಬ್ರಾಹ್ಮಣ. "ಆಪ್ರೀಃ" ಎಂಬ ಸೂಕ್ತಗಳು ದೇವತೆಯನ್ನು ಸಂತೋಷಗೊಳಿಸುವುವಾದುದರಿಂದ—ಆಪ್ರೀಣನ ಮಾಡುವುದರಿಂದ—ಅವುಗಳಿಗೆ ಈ ಹೆಸರು.

ರಚಿಸುವ ಮುನ್ನ ಯಾಸ್ಕನು ಬಹುಮಟ್ಟಿನ ಪ್ರಯತ್ನದಿಂದ ಮೊದಲಿನ ಅರ್ಥವನ್ನು ಸಂಗ್ರಹಿಸುವ ಪ್ರಯತ್ನ ಮಾಡಿರುವುದು ಪ್ರಾಯಶಃ ಇವುಗಳನ್ನು ಓದಿದ ಎಲ್ಲರಿಗೂ ವಿಶದವಾಗದಿರದು.

ವೈದಿಕ ವಾಙ್ಮಯ ವಿಸ್ತಾರವನ್ನು ಪರಿಚಯ ಮಾಡಿಕೊಡುವಾಗ ಅನುಕ್ರಮಣಿಗಳ ವಿಷಯವನ್ನು ತಿಳಿಸಿದೆ. ಇವುಗಳಲ್ಲಿ ಅತಿ ಮುಖ್ಯವಾದ ಕಾತ್ಯಾಯನನಿಂದ ರಚಿತವಾದ "ಸರ್ವಾನುಕ್ರಮಣಿ" ಎಂಬುದೂ ವೇದಾರ್ಥ ಪರಿಜ್ಞಾನಕ್ಕೆ ಬಹು ಉಪಯುಕ್ತವಾದ ಸಾಧನ. ಇದರೊಡನೆ "ಬೃಹದ್ದೇವತಾ" ಎಂಬ ಗ್ರಂಥವನ್ನೂ ಸಹ ಪರಿಚಯ ಮಾಡಿಕೊಳ್ಳಬೇಕು. ಈ ಬೃಹದ್ದೇವತೆಯಲ್ಲಿ ವೇದಮಂತ್ರಗಳಲ್ಲಿ ಬರುವ ಅನೇಕ ಕಥಾಸಂದರ್ಭಗಳು ಪೂರ್ಣವಾಗಿಯೂ ವಿಶದವಾಗಿಯೂ ತಿಳಿಯಬರುತ್ತವೆ.

ವೇದದಲ್ಲಿನ ವಾಕ್ಯಗಳ ಅರ್ಥವನ್ನು ತಿಳಿಯುವುದಕ್ಕಾಗಿ ಪೂರ್ವಮೀಮಾಂಸಾಶಾಸ್ತ್ರ ಅನೇಕ ವಿಧಿಗಳನ್ನೇರ್ಪಡಿಸಿದೆ. ಹೀಗೆಯೇ ವೇದಾಂತಮತಪ್ರವರ್ತಕರಾದ ಶ್ರೀಶಂಕರ, ಶ್ರೀರಾಮಾನುಜ. ಶ್ರೀಮಧ್ವ ಮೊದಲಾದ ಆಚಾರ್ಯರೂ ಸಹ ಅನೇಕ ವೇಳೆ ವೇದಮಂತ್ರಗಳ ಅರ್ಥವನ್ನು ವಿವರಿಸಿದ್ದಾರೆ. ಈ ವಿವರಣೆಗಳು ಸಾಮಾನ್ಯವಾಗಿ ಅವರು ಪ್ರತಿಪಾದಿಸುವ ತತ್ತ್ವವನ್ನು ಪುಷ್ಟೀಕರಿಸುವಂತೆ ಆಗಿರುವುದರಿಂದ, ಮೊದಲಿನಿಂದ ಸಂಪ್ರದಾಯವಾಗಿ ಬಂದ ಅರ್ಥವೆಂದು ಹೇಳಲಾಗುವುದಿಲ್ಲವಾದರೂ, ಕೆಲವು ವೇಳೆ ಕೆಲವು ಋಕ್ಕುಗಳನ್ನು ಅರ್ಥ ಮಾಡಿಕೊಳ್ಳಲು ತುಂಬಾ ಸಹಾಯವಾಗುತ್ತದೆ.

ಇವೆಲ್ಲಕ್ಕಿಂತಲೂ ಮಿಗಿಲಾದ ಸಹಾಯ ಬಂದುದು ಕ್ರಿ. ಶ.

ಗಳನೆಯ ಶತಮಾನದ ಮಧ್ಯಭಾಗದಲ್ಲಿ. ವಿಜಯನಗರ ಸಂಸ್ಥಾನ ಸ್ಥಾಪನೆಯಾದ ತರುವಾಯ ವಿದ್ಯಾರಣ್ಯಸ್ವಾಮಿಗಳ ಸಹೋದರರಾದ ಸಾಯಣಾಚಾರ್ಯರು "ವೇದಾರ್ಥಪ್ರಕಾಶ" ವೆಂಬ ಋಗ್ವೇದ ಭಾಷ್ಯವನ್ನು ರಚಿಸಿದರು. ಈ ಭಾಷ್ಯದಲ್ಲಿ ಪ್ರತಿಯೊಂದು ಋಕ್ಕಿನ ಪ್ರತಿಯೊಂದು ಪದಕ್ಕೂ ಅರ್ಥವನ್ನು ಕೊಡುವುದಲ್ಲದೆ, ಕಷ್ಟವಾದ ಪದಗಳ ವ್ಯುತ್ಪತ್ತಿಯನ್ನೂ, ವ್ಯಾಕರಣಾಂಶಗಳನ್ನೂ, ಯಾಗದಲ್ಲಿ ಅವುಗಳ ವಿನಿಯೋಗ ವನ್ನೂ, ಸ್ವರ ಪ್ರಕ್ರಿಯೆಯನ್ನೂ ವಿಶದವಾಗಿ ವಿವರಿಸಿದ್ದಾರೆ. ಇಲ್ಲಿ ಸಾಯಣ ಭಾಷ್ಯದ ವಿಷಯವಾಗಿ ಒಂದು ಮಾತನ್ನು ಹೇಳಬೇಕು. ವೇದಾರ್ಥವನ್ನು ತಿಳಿಸುವ ಅಖಂಡವಾದ ಸಂಪ್ರದಾಯವೊಂದು ಏರ್ಪಡದೆ ಇದ್ದುದರಿಂದ ಅನೇಕ ವೇಳೆ ಸಾಯಣಾಚಾರ್ಯರು ವಿಧವಿಧವಾದ ಅನೇಕ ವಿವರಣೆಗಳನ್ನು ಹೊಂದಿಸಿ ಜೋಡಿಸಬೇಕಾಯಿತು. ಆದರೆ ವೇದಧರ್ಮದ ಸಂಪ್ರದಾಯವೂ, ಅದೇ ಸಂಬಂಧವಾದ ಒಂದು ಘನವಾದ ಪ್ರತಿಭೆಯೂ, ಸರಿಯಾದ ಅರ್ಥವನ್ನು ಊಹಿಸುವ ಶಕ್ತಿಯೂ ಶ್ರೇಷ್ಠ ಭಾರತೀಯರಿಗೆ ಸಹಜವಾಗಿಯೇ ಇರುವುದರಿಂದ ಸಾಯಣಾಚಾರ್ಯರ ಭಾಷ್ಯವನ್ನು ತೀರ ಕಡೆಗಣಿಸಲಾಗದು. ರುಡಾಲ್ಫ್ ರಾಥ್ ಮುಂತಾದ ಕೆಲಮಂದಿ ಯೂರೋಪ್ ಖಂಡದ ವಿದ್ವಾಂಸರು ಸಾಯಣಾಚಾರ್ಯರ ಭಾಷ್ಯದಲ್ಲಿನ ಅರ್ಥ ಕ್ಕಿಂತಲೂ ಹೆಚ್ಚು ಸೂಕ್ತವಾದ ಅರ್ಥವನ್ನು ಭಾಷಾಶಾಸ್ತ್ರ ಮುಂತಾದ ಹಲವು ಆಧುನಿಕ ಸಾಧನಗಳು ತಂದುಕೊಡುತ್ತ ವೆಂದು ಹೇಳಿದ್ದರೂ, ಈಚೆಗೆ ಪಿಶೆಲ್ ಮತ್ತು ಗೆಲ್ಡ್ನರ್ ಮುಂತಾದ ಕೆಲವರು ಸಾಯಣಭಾಷ್ಯದಲ್ಲಿನ ಅರ್ಥವೇ ಬಹು ವೇಳೆ ಉಚಿತವೂ ನಿಷ್ಕೃಷ್ಟವೂ ಆಗಿರುತ್ತದೆಂದು ಹೇಳುತ್ತಾರೆ.

ಸಾಯಣಾಚಾರ್ಯರ ಭಾಷ್ಯವಲ್ಲದೆ, ಸ್ಕಂದಸ್ವಾಮಿ, ಮಾಧವ ಭಟ್ಟ ಮುಂತಾದವರ ಭಾಷ್ಯಗಳೂ ಇವೆ. ಈ ರೀತಿ ಭರತ ವರ್ಷದಲ್ಲಿ ವೇದಾರ್ಥವನ್ನು ಗ್ರಹಿಸಲು ಬಹಳ ಪ್ರಯತ್ನ ನಡೆದಿದೆ; ಈ ಮಾರ್ಗವನ್ನು ಸಂಪ್ರದಾಯ ಮಾರ್ಗ ಎನ್ನ ಬಹುದು.

ಇದಲ್ಲದೆ, ಕ್ರಿ.ಶ. ೧೯ನೆಯ ಶತಮಾನದ ಆರಂಭದಿಂದ ಈಚೆಗೆ ಒಂದು ಮಾರ್ಗವೇರ್ಪಟ್ಟಿದೆ; ಇದಕ್ಕೆ ಆಧುನಿಕಮಾರ್ಗ ಎಂದು ಹೆಸರು ಕೊಡಬಹುದು. ಕ್ರಿ.ಶ. ೧೮೦೫ನೆಯ ವರ್ಷ ದಲ್ಲಿ ಕೋಲ್ ಬ್ರೂಕ್ ಎಂಬ ವಿದ್ವಾಂಸನು 'ಏಷಿಯಾಟಿಕ್ ರಿಸರ್ಚಸ್' ಎಂಬ ಪತ್ರಿಕೆಯಲ್ಲಿ "ಹಿಂದುಗಳ ಪವಿತ್ರಗ್ರಂಥ ವಾದ ವೇದಗಳನ್ನು ಕುರಿತು" ಎಂಬ ಲೇಖನವನ್ನು ಬರೆದನು. ಈ ಲೇಖನ ವೇದವನ್ನು ತೆಗಳುವಂತಹದಾಗಿದ್ದಿತು. ಆದರೆ ಇಪ್ಪತ್ತು ವರ್ಷಗಳ ತರುವಾಯ ಫ್ರೀಡ್ರಿಕ್ ರೋಸೆನ್ ಎಂಬ ಜರ್ಮನ್ ವಿದ್ವಾಂಸನು ಮೊದಲಬಾರಿ ಋಗ್ವೇದವನ್ನು ಸಂಪಾದಿಸಿ ಅಚ್ಚುಹಾಕತೊಡಗಿದನು ; ಆದರೆ ಮೊದಲ ಅಷ್ಟಕ ಮುಗಿಯುವಷ್ಟರಲ್ಲಿಯೇ ದುರದೃಷ್ಟವಶಾತ್ ತೀರಿಹೋದನು. ೧೮೪೬ನೆಯ ವರ್ಷದಲ್ಲಿ ರುಡಾಲ್ಫ್ ರಾಥ್ ಎಂಬ ಇನ್ನೊಬ್ಬ ಜರ್ಮನ್ ಪಂಡಿತನು "ವೇದದಲ್ಲಿ ಕಾವ್ಯ ಮತ್ತು ಚರಿತ್ರೆ" ಎಂಬ ಬಹು ಮುಖ್ಯವಾದ ಲೇಖನವನ್ನು ಬರೆದನು. ಅಂದಿ ನಿಂದಲೇ ಯೂರೋಪಿನಲ್ಲಿ ವೇದಗಳನ್ನು ಓದಿ ತಿಳಿದುಕೊಳ್ಳ ಬೇಕೆಂಬ ಪ್ರಯತ್ನ ಮೊದಲಾಯಿತು. ರಾಥ್ ಮತ್ತು ಆಟೋ ಬೋಟ್ಲಿಂಗ್ ಎಂಬ ಇಬ್ಬರು ವಿದ್ವಾಂಸರೂ ಸೇರಿ ಸಂಪಾದಿಸಿದ "ಸಂಸ್ಕೃತ-ಜರ್ಮನ್" ನಿಘಂಟು (St. Petersburg Sanskrit-German Lexicon) ಪ್ರತಿಯೊಂದು ಪದಕ್ಕೂ

ಋಗ್ವೇದದ ಕಾಲದಿಂದ ಸಾಹಿತ್ಯದ ಕಾಲದವರೆಗೆ ಆಗಿರುವ ಅರ್ಥವ್ಯತ್ಯಾಸಗಳನ್ನೆಲ್ಲ ಒಳಗೊಂಡು ಅತ್ಯುಪಯುಕ್ತವಾಗಿದೆ. ಅನಂತರ ವೀಬರ್ ಎಂಬ ಇನ್ನೊಬ್ಬ ಜರ್ಮನಿ ದೇಶದ ಪಂಡಿತನೂ ವೈದಿಕವಾಙ್ಮಯವನ್ನೆಲ್ಲ ಸ್ಥೂಲವಾಗಿ ಪರಿಚಯಮಾಡಿ ಕೊಡಲು ಪ್ರಯತ್ನಮಾಡಿದನು. ಆದರೆ ಈವರೆಗೂ ಯಾವುದೊಂದು ವೇದವಾಗಲಿ ಪೂರ್ಣವಾಗಿ ಅಚ್ಚಾಗಿರಲಿಲ್ಲ. ಸುಪ್ರಸಿದ್ಧ ವಿದ್ವಾಂಸನಾದ ಮ್ಯಾಕ್ಸ್‌ಮುಲರ್ ಪಂಡಿತನೇ ಕ್ರಿ.ಶ. ೧೮೪೯ರಲ್ಲಿ ಋಗ್ವೇದವನ್ನೆಲ್ಲ ಸಾಯಣಭಾಷ್ಯದೊಡನೆ ಅಚ್ಚು ಹಾಕಿಸತೊಡಗಿ ೧೮೭೫ನೆಯ ವರ್ಷದಲ್ಲಿ ಮುಗಿಸಿದನು; ಈ ಮೊದಲ ಮುದ್ರಣದ ಆವಶ್ಯಕತೆಯನ್ನಾಗಲಿ ಬೆಲೆಯನ್ನಾಗಲಿ ವರ್ಣಿಸಲಸದಳ. ಇಷ್ಟರಲ್ಲಿಯೇ, ಎಂದರೆ ೧೮೬೩ರ ವೇಳೆಗಾಗಲೆ, ಥಿಯೋಡರ್ ಔಫ್ರೆಕ್ಟ್ ಎಂಬ ಮಹನೀಯನು ಋಗ್ವೇದ ಸೂಕ್ತಗಳನ್ನೆಲ್ಲಾ ಮುದ್ರಿಸಿ ಸಂಪಾದಿಸಿದ್ದನು. ಅಂದಿನಿಂದೀಚೆಗೆ ಯೂರೋಪ್ ಖಂಡದ ಪ್ರತಿಯೊಂದು ದೊಡ್ಡ ವಿಶ್ವವಿದ್ಯಾನಿಲಯವೂ ಸಂಸ್ಕೃತಭಾಷೆಯ ಮತ್ತು ಮುಖ್ಯವಾಗಿ ವೇದಗಳ ವಿಷಯವಾಗಿ ಅಭ್ಯಾಸ ಮತ್ತು ಅನ್ವೇಷಣೆಯಲ್ಲಿ ತೊಡಗಿತು. ಮ್ಯಾಕ್ಸ್‌ಮುಲರ್ ಪಂಡಿತನ "ಪೂರ್ವದೇಶಗಳ ಪವಿತ್ರಗ್ರಂಥಗಳು" (*Sacred Books of the East*) ಎಂಬ ಗ್ರಂಥಮಾಲೆ ಮತ್ತು ಮೂಯಿರ್ ಪಂಡಿತನ "ಸಂಸ್ಕೃತದಲ್ಲಿನ ಮೂಲಗ್ರಂಥಗಳು" ಎಂಬ ಗ್ರಂಥಮಾಲೆ ಇವೆರಡೂ ಸಂಸ್ಕೃತದಿಂದ ಇಂಗ್ಲಿಷ್ ಭಾಷೆಗೆ ಮಾಡಿದ ಭಾಷಾಂತರವಾಗಿವೆ; ವೇದದ ತಿರುಳನ್ನು ತಿಳಿಯಲಾಶಿಸುವವರಿಗೆ ಬಹುಮಟ್ಟಿಗೆ ಸಹಾಯಕಗಳಾಗಿವೆ. ಇಷ್ಟೇ ಅಲ್ಲದೆ, ಹಾಗ್, ಬ್ಲೂಂಫೀಲ್ಡ್, ಗ್ರಾಸ್‌ಮನ್, ಬೂಲರ್, ಬೆನ್ಫಿ, ಯಾಕೊಬಿ

ಮುಂತಾದ ಅನೇಕ ಮಹನೀಯರು ಚಿರಸ್ಮರಣೀಯವಾದ ಸಹಾಯ ಸಂಪತ್ತಿಯನ್ನೊದಗಿಸಿಕೊಟ್ಟಿದ್ದಾರೆ. ಇತ್ತೀಚೆಗೆ, ಎಂದರೆ ಕಳೆದ ಶತಮಾನದ ಕೊನೆಯ ಭಾಗದಿಂದೀಚೆಗೆ ಭರತಖಂಡದಲ್ಲಿನ ಅನೇಕ ವಿದ್ವಾಂಸರೂ ಆಧುನಿಕ ಮತ್ತು ಸಾಂಪ್ರದಾಯಿಕ ಮಾರ್ಗಗಳನ್ನು ಸಮನ್ವಯಮಾಡಿಕೊಂಡು ವೇದಾರ್ಥಪರಿಶೀಲನೆಗೆ ತೊಡಗಿ ಬಹಳ ಉಪಯುಕ್ತವಾದ ಅನೇಕ ಸಂಶೋಧನೆಗಳನ್ನು ನಡೆಸಿದ್ದಾರೆ. ಇವರಲ್ಲಿ ಸುಪ್ರಸಿದ್ಧ ವಿದ್ವಾಂಸರೂ ದೇಶಭಕ್ತಾಗ್ರಗಣ್ಯರೂ ಆದ ಲೋಕಮಾನ್ಯ ಬಾಲಗಂಗಾಧರ ತಿಲಕರೂ, ಡಾ|| ರಾಮಕೃಷ್ಣ ಗೋಪಾಲ ಭಂಡಾರ್ಕರರೂ, ಮೈಸೂರು ಸಂಸ್ಥಾನದ ಡಾ|| ಎ. ವೆಂಕಟ ಸುಬ್ಬಯ್ಯನವರೂ, ಡಾ|| ಆರ್. ಶಾಮಶಾಸ್ತ್ರಿಗಳೂ ಅತಿ ಮುಖ್ಯರೆಂದು ಪರಿಗಣಿಸಲ್ಪಟ್ಟಿದ್ದಾರೆ.

ಇಂತಹ ವಿದ್ವಾಂಸರ ಲೇಖನಗಳಲ್ಲದೆ, ಯೂರೋಪಿನಲ್ಲಿ ಸಂಸ್ಕೃತ ಭಾಷಾಭ್ಯಾಸದಿಂದ ಪ್ರಚೋದಿತವಾದ ಭಾಷಾ ಶಾಸ್ತ್ರ (*Linguistics*)ವೂ ಮತ್ತು ಭರತಖಂಡದ ಮತಧರ್ಮ ಪರಿಶೀಲನೆಯಿಂದ ಉದ್ಭವಿಸಿದ ಐತಿಹ್ಯಶಾಸ್ತ್ರ (*Comparative Mythology*)ವೂ ತುಲನಾತ್ಮಕ ಮತಶಾಸ್ತ್ರ (*Comparative Religion*)ವೂ ಅಲ್ಲದೆ ಪುರಾತನ ಪಾರಸಿಕರ ಪವಿತ್ರ ಗ್ರಂಥವಾದ ಜೆಂಡ್ ಅವೆಸ್ತ (*Zend Avesta*), ಮಾನವಜನಾಂಗ ಶಾಸ್ತ್ರ (*Ethnology*), ಭೂಶಾಸ್ತ್ರ (*Geology*) ಮತ್ತು ಶಾಸನ ಶಾಸ್ತ್ರ (*Epigraphy*) ಇವುಗಳು ವೇದವನ್ನು ತಿಳಿಯಲು ಬಹು ಸಹಾಯಮಾಡಿವೆ.

ಹೀಗೆ ವೇದದ ಅರ್ಥವನ್ನು ತಿಳಿಯಲು ಸಂಪ್ರದಾಯವಾಗಿ ಬಂದ ಮಾರ್ಗವೊಂದಲ್ಲದೆ, ಈ ಮೇಲೆ ಹೇಳಿದ ಶಾಸ್ತ್ರಗಳೆಲ್ಲ

ದರ ಸಹಾಯವನ್ನು ಪಡೆದು ಸಂಪ್ರದಾಯ ಮಾರ್ಗವನ್ನೂ ಬಿಡದ ಆಧುನಿಕ ಮಾರ್ಗವೇರ್ಪಟ್ಟಿದೆ; ಇದರಿಂದಾಗಲೇ ಬಹುಮಟ್ಟಿನ ಉಪಕಾರವೂ ಆಗಿದೆಯೆಂಬುದು ನಿರ್ವಿವಾದ ವಿಷಯ.

## ೯. ವೇದವನ್ನು ಸಂರಕ್ಷಿಸಿರುವ ಬಗೆ

ಅನೇಕ ಸಾವಿರ ವರ್ಷಗಳಿಂದ ಒಬ್ಬರಿಂದ ಒಬ್ಬರಿಗೆ ಬಾಯಿಪಾಠದ ಮೂಲಕ ಬಂದ ವೇದದಲ್ಲಿ ಕಾರಣಾಂತರ ಗಳಿಂದ ಇದ್ದದ್ದು ಬಿಟ್ಟುಹೋಗಿ ಇಲ್ಲದ್ದು ಬಂದು ಸೇರಿಕೊಳ್ಳ ಬಹುದಾಗಿತ್ತು. ಆದರೆ ವೇದ ಮೊದಲು ಹೇಗಿತ್ತೋ ಪ್ರಾಯಶಃ ಹಾಗೆಯೇ ಇಂದಿಗೂ ಉಳಿದುಬಂದಿರುವುದು ಒಂದು ಅತಿಶಯವಾದ ವಿಷಯ. ಈ ಸಂರಕ್ಷಣೆ ಹೇಗೆ ಸಾಧ್ಯ ವಾಯಿತು ಎಂದು ತಿಳಿಯಲು ವಾಚಕರು ಕುತೂಹಲಪಡು ವುದು ಸಹಜ.

"ವೇದದ ಪದ, ಅಕ್ಷರ, ಮಾತ್ರೆ, ಸ್ವರ—ಇವುಗಳಾವುದ ರಲ್ಲೂ ಎಳ್ಳಷ್ಟು ವ್ಯತ್ಯಾಸವಾದರೂ ಕಗ್ಗತ್ತಲೆಯ ನರಕವಾಸ ಸಿದ್ಧ" ಎಂದು ಒಂದು ಕಡೆ ಉಕ್ತವಾಗಿದೆ. ಮಂತ್ರವನ್ನು ಅಪಸ್ವರದಲ್ಲಿ ಹಾಡಿದರೆ ಹಾಗೆ ಹಾಡಿದವನ ಪಿತೃಗಳೆಲ್ಲರೂ ದುರ್ಗತಿ ಪಡೆಯುವುದಲ್ಲದೆ ಜೀವಂತರೂ ಕೂಡ ದುಃಖಕ್ಕೆ ಈಡಾಗುವರು ಎಂಬ ಭಯವಿತ್ತು. ಈ ಭಯ ಈ ಕಟ್ಟು ನಿಟ್ಟುಗಳು ಇದ್ದುದರಿಂದಲೇ ವೇದದ ಪದಗಳೂ ಸ್ವರಗಳೂ ಇಂದೂ ಶುದ್ಧವಾಗಿ ಉಳಿದಿವೆ.

ಹೀಗೆ ಅದನ್ನು ಶುದ್ಧವಾಗಿ ಉಳಿಸಲು ನಾಲ್ಕು ಪಾಠ ವಿಧಾನಗಳು ನಿರ್ಮಾಣವಾದುವು: (೧) ಋಕ್ಕನ್ನು ಹೇಳಿ

ಅನಂತರ ಪದಗಳನ್ನು ಬಿಡಿಸುವುದು ಮೊದಲನೆಯದು. (೨) ಮೊದಲನೆಯ ಎರಡು ಪದಗಳನ್ನು ಒಟ್ಟಿಗೆ ಹೇಳಿ ಅನಂತರ ಎರಡನೆಯ ಮೂರನೆಯ ಪದಗಳನ್ನು ಒಟ್ಟಿಗೆ ಹೇಳುವುದು ಎರಡನೆಯದು. (೩) ಮೊದಲನೆಯ ಎರಡು ಪದಗಳನ್ನು ಒಟ್ಟಿಗೆ ಹೇಳಿ, ಅವೆರಡನ್ನೂ ಹಿಂದುಮುಂದು ಮಾಡಿ ಹೇಳಿ ಪುನಃ ಮೊದಲು ಹೇಳಿದಂತೆಯೇ ಹೇಳುವುದು. ಇದಾದಮೇಲೆ ಎರಡನೆಯ ಮೂರನೆಯ ಪದಗಳನ್ನು ಒಟ್ಟಿಗೆ ಹೇಳಿ ಅವೆರಡನ್ನು ಹಿಂದು ಮುಂದು ಮಾಡಿ ಹೇಳಿ ಕೊನೆಯಲ್ಲಿ ಅವೆರಡನ್ನು ಮೊದಲಿನಂತೆಯೆ ಹೇಳುವುದು ಮೂರನೆಯದು. (೪) ನಾಲ್ಕನೆಯದು ಇನ್ನೂ ತೊಡಕಾದುದು. ಮೊದಲನೆಯ ಎರಡನೆಯ ಪದಗಳನ್ನು ಒಟ್ಟಿಗೆ ಹೇಳಿ ಅವೆರಡನ್ನು ಹಿಂದುಮುಂದು ಮಾಡಿ ಹೇಳುವುದು. ಅನಂತರ ಮೊದಲ ಮೂರು ಪದಗಳನ್ನು ಒಟ್ಟಾಗಿ ಹೇಳಿ, ಮೂರನ್ನೂ ಹಿಂತಿರುಗಿಸಿ ಹೇಳಿ ಪುನಃ ಮೊದಲು ಹೇಳಿದಂತೆಯೇ ಹೇಳುವುದು. ಮೊದಲನೆಯದು ಪದಪಾಠ, ಎರಡನೆಯದು ಕ್ರಮಪಾಠ, ಮೂರನೆಯದು ಜಟಾಪಾಠ, ನಾಲ್ಕನೆಯದು ಘನಪಾಠ. ಇವೊಂದೊಂದರ ಉದಾಹರಣೆಯನ್ನು ಈ ಕೆಳಗೆ ಕೊಟ್ಟಿದೆ:

ಮಂತ್ರದ ಒಂದು ಚರಣ—ಅಗ್ನಿಮೀಳೇ ಪುರೋಹಿತಂ.

ಪದಪಾಠ—ಅಗ್ನಿಂ, ಈಳೇ, ಪುರೋಹಿತಂ.

ಕ್ರಮಪಾಠ—ಅಗ್ನಿಂ ಈಳೇ, ಈಳೇ ಪುರೋಹಿತಂ.

ಜಟಾಪಾಠ—ಅಗ್ನಿಂ ಈಳೇ, ಈಳೇ ಅಗ್ನಿಂ, ಅಗ್ನಿಂ ಈಳೇ ;
ಈಳೇ ಪುರೋಹಿತಂ, ಪುರೋಹಿತಂ ಈಳೇ,
ಈಳೇ ಪುರೋಹಿತಂ, ಇತ್ಯಾದಿ.

ಘನಪಾಠ—ಅಗ್ನಿಂ ಈಳೇ, ಈಳೇ ಅಗ್ನಿಂ ;
ಅಗ್ನಿಂ ಈಳೇ ಪುರೋಹಿತಂ, ಪುರೋಹಿತಂ ಈಳೇ
ಅಗ್ನಿಂ, ಅಗ್ನಿಂ ಈಳೇ ಪುರೋಹಿತಂ ;
ಈಳೇ ಪುರೋಹಿತಂ, ಪುರೋಹಿತಂ ಈಳೇ,
ಇತ್ಯಾದಿ